|| ಶ್ರೀಮೂಲರಾಮೋ ವಿಜಯತೇ ||



|| ಶ್ರೀಗುರುರಾಜೋ ವಿಜಯತೇ ||

# || ವ್ರತಮುಕ್ತಾವಲೀ ||

ಪ್ರಧಾನ ಸಂಪಾದಕರು
ರಾಜಾ. ಎಸ್. ರಾಜಗೋಪಾಲಾಚಾರ್ಯ

ಸಂಪಾದಕರು
ವಿದ್ವಾನ್ ವೇಂಕಟನರಸಿಂಹಾಚಾರ್ಯ ರಾಜಪುರೋಹಿತ
ಅಧ್ಯಾಪಕರು, ಸಂಸ್ಕೃತ ವಿದ್ವಾನ್, ಎಂ.ಎ., ಬಿ.ಎಡ್.
ಬೆಂಗಳೂರು

ಸಹ-ಸಂಪಾದಕರು
ವಿದ್ವಾನ್ ಬಿ.ಕೆ. ವಿಜಯವಿಠ್ಠಲಾಚಾರ್ಯ
ಮಂತ್ರಾಲಯ

ಪ್ರಕಾಶಕರು
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀರಾಘವೇಂದ್ರಸ್ವಾಮಿಗಳವರ ಮಠ
ಮಂತ್ರಾಲಯ

ಗ್ರಂಥನಾಮ : ವ್ರತಮುಕ್ತಾವಲೀ

VRATHAMUKTHAVALEE

ಪ್ರಥಮ ಮುದ್ರಣ : ೨೦೦೫

ಹಕ್ಕು : ಶ್ರೀರಾಘವೇಂದ್ರಸ್ವಾಮಿಗಳವರ ಮಠ
ಮಂತ್ರಾಲಯ

ಪ್ರತಿಗಳು : ೧೦,೦೦೦

ಪುಟ : xvi + 332

ಬೆಲೆ :

ಅಕ್ಷರ ಜೋಡಣೆ : ಶ್ರೀಗುರುಸಾರ್ವಭೌಮ ವಿದ್ಯುನ್ಮಾನ ಮುದ್ರಣಾಲಯ
ನಂ. ೧೯/೨೦, 'ಶ್ರೀಮೂಲರಾಮ', ೨ನೇ ಅಡ್ಡರಸ್ತೆ
೫ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು-೧೮
**ದೂರವಾಣಿ** : 080-26606080

ಮುದ್ರಕರು : **ಸತ್ಯಶ್ರೀ ಪ್ರಿಂಟರ್ಸ್ (ಪ್ರೈ) ಲಿ.,**
ನಂ. 164, 5ನೇ ಮುಖ್ಯರಸ್ತೆ, ಚಾಮರಾಜಪೇಟೆ,
ಬೆಂಗಳೂರು - 560 018.
**ದೂರವಾಣಿ : 6525736**



# ಗ್ರಂಥ ಸಮರ್ಪಣೆ

ಶ್ರೀಹಂಸನಾಮಕ ಪರಮಾತ್ಮ ಪ್ರವರ್ತಿತವಾದ ಪರಂಪರೆಯಲ್ಲಿ ಬಂದಿರುವ

ಸರ್ವಜ್ಞರಾದ ಶ್ರೀಪಾವನಪವನಾಂಶಸಂಭೂತರಾದ

**ಜಗದ್ಗುರು ಶ್ರೀಮಧ್ವಾಚಾರ್ಯರ**

ಮೂಲಮಹಾಸಂಸ್ಥಾನಾಧೀಶ್ವರರಾದ ವೇದಾಂತ ಸಾಮ್ರಾಜ್ಯ

ದಿಗ್ವಿಜಯ ವಿದ್ಯಾಸಿಂಹಾಸನಾಧೀಶ್ವರರಾದ

**ಶ್ರೀಮದ್ವಿಜಯೀಂದ್ರತೀರ್ಥಶ್ರೀಪಾದಂಗಳವರ**

ಕರಕಮಲಸಂಜಾತರಾದ **ಶ್ರೀಮತ್ಸುಧೀಂದ್ರತೀರ್ಥಶ್ರೀಪಾದಂಗಳವರ**

ವರಕುಮಾರಕರಾದ **ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರ**

ಉಪಾಸ್ಯಮೂರ್ತಿಯಾದ **ಶ್ರೀಮೂಲರಘುಪತಿವೇದವ್ಯಾಸದೇವರ**

ಚರಣಾರವಿಂದಗಳಲ್ಲಿ ಈ ಗ್ರಂಥವನ್ನು ಭಕ್ತಿಶ್ರದ್ಧಾದರಪೂರ್ವಕವಾಗಿ

ಸಮರ್ಪಿಸಲಾಗಿದೆ.

**ಸಂಪಾದಕಮಂಡಲಿ**



# ಆಶೀರ್ವಚನ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯಪ್ರಮಾಣಪಾರಾವಾರಪಾರಂಗತ
ಸರ್ವತಂತ್ರಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ
ಶ್ರೀಮನ್ಮೂಲರಘುಪತಿವೇದವ್ಯಾಸದೇವದಿವ್ಯಶ್ರೀಪಾದಪದ್ಮಾರಾಧಕ ಜಗದ್ಗುರು ಶ್ರೀಮನ್ಮಧ್ವಾಚಾರ್ಯ
ಮೂಲಮಹಾಸಂಸ್ಥಾನಾಧೀಶ್ವರರಾದ ಶ್ರೀರಾಘವೇಂದ್ರಸ್ವಾಮಿಗಳವರ ಮಠದ
ವೇದಾಂತಸಾಮ್ರಾಜ್ಯದಿಗ್ವಿಜಯವಿದ್ಯಾಸಿಂಹಾಸನಾಧೀಶ್ವರರಾದ ಶ್ರೀಮತ್ಸುಯಮೀಂದ್ರತೀರ್ಥ
ಶ್ರೀಪಾದಂಗಳವರ ಕರಕಮಲಸಂಜಾತರಾದ ಶ್ರೀಮತ್ಸುಜಯೀಂದ್ರತೀರ್ಥ ಶ್ರೀಪಾದಂಗಳವರ
ವರಕುಮಾರಕರಾದ

## ಶ್ರೀಮತ್ಸುಶಮೀಂದ್ರತೀರ್ಥ ಶ್ರೀಪಾದಂಗಳವರು

ಮಾಡುವ ನಾರಾಯಣ ಸ್ಮರಣೆಗಳು

ಹಂಸನಾಮಕ ಪರಮಾತ್ಮನಿಂದ ಹರಿದುಬಂದ ಪರಂಪರೆಯಲ್ಲಿ ಶ್ರೀಮದಾಚಾರ್ಯರು ಅವತಾರ ಮಾಡಿ, ಮಧ್ವಸಿದ್ಧಾಂತಸ್ಥಾಪನೆಯನ್ನು ಮಾಡಿ, ಹರಿಸರ್ವೋತ್ತಮತ್ವವನ್ನು ಜಗತ್ತಿಗೆ ಸಾರಿದರು. ಅದೇ ಭವ್ಯ ಪರಂಪರೆಯಲ್ಲಿ ಬಂದಿರುವ ನಮ್ಮ ಮಠವು ಅನೇಕ ಗ್ರಂಥಪ್ರಕಾಶನಗಳನ್ನು ಮಾಡುತ್ತಾ, ಸಾಹಿತ್ಯ ಸೇವೆಯನ್ನು ಮಾಡುತ್ತಾ ಬಂದಿದೆ. ನಮ್ಮ ಪೂರ್ವಿಕರ ಕಾಲದಿಂದಲೂ ನಮ್ಮ ಮಠದ ಪಂಚಾಂಗವನ್ನು ಪ್ರಕಾಶನ ಮಾಡುತ್ತಾ ಬಂದಿರುವುದು ಸರಿಯಷ್ಟೇ. ಕಳೆದ ಸಂವತ್ಸರದಿಂದ ಪಂಚಾಂಗದ ಜೊತೆಯಲ್ಲಿ ಉಪಯುಕ್ತವಾಗುವಂತಹ ಗ್ರಂಥವೊಂದನ್ನು ಕೊಡುವ ಪರಿಪಾಠವನ್ನು ಪ್ರಾರಂಭಿಸಿದ್ದೇವೆ. ಈ ಪಾರ್ಥಿವ ಸಂವತ್ಸರದ ಪಂಚಾಂಗದೊಂದಿಗೆ **'ವ್ರತಮುಕ್ತಾವಲೀ'** ಎಂಬ ಗ್ರಂಥವನ್ನು ಮುದ್ರಣಮಾಡಿ ಪ್ರಕಾಶಿಸುತ್ತಿರುವುದು ನಮಗೆ ಅತೀವ ಸಂತೋಷವನ್ನುಂಟುಮಾಡಿದೆ. ಅನಾದಿಕಾಲದಿಂದಲೂ ನಡೆದುಬಂದ ವ್ರತ, ಸಂಪ್ರದಾಯ, ಆಚರಣೆಗಳನ್ನು ಈ ಗ್ರಂಥದಲ್ಲಿ ನಮ್ಮ ಮಠದ ಸಂಪ್ರದಾಯದ ಪ್ರಕಾರವಾಗಿ ಮುದ್ರಿಸಿ, ಹೊರತರಲಾಗಿದೆ.

ಈ ಗ್ರಂಥದಲ್ಲಿ ಬರುವ ಕಲಶಪೂಜಾ, ಪೀಠಪೂಜಾ, ಪ್ರಾಣಪ್ರತಿಷ್ಠಾವಿಧಿ, ಆವರಣಪೂಜಾ ಇವುಗಳನ್ನು ಶ್ರೀಸುಮತೀಂದ್ರತೀರ್ಥರು ಹಾಗೂ ಶ್ರೀವರದೇಂದ್ರತೀರ್ಥರು ರಚಿಸಿದ ಸಂಪ್ರದಾಯದಂತೆ ನೀಡಲಾಗಿದೆ. ಈ ಗ್ರಂಥದ ಉಪಯೋಗವನ್ನು ಪಡೆದು, ಹರಿಪ್ರೀತಿಯಾಗುವ ವ್ರತಗಳನ್ನಾಚರಿಸಿ, ಶ್ರೇಯೋವಂತರಾಗಿರಿ ಎಂದು ನಮ್ಮ ಉಪಾಸ್ಯಮೂರ್ತಿಯಾದ ಶ್ರೀಮೂಲರಘುಪತಿವೇದವ್ಯಾಸದೇವರಲ್ಲಿ ತಥಾ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು.

# ಮುನ್ನುಡಿ

ಸಮಾಜದ ಇಂದಿನ ಮಾನಸ ಪರಿಸ್ಥಿತಿ ಆಧ್ಯಾತ್ಮಿಕ ದೃಷ್ಟಿಯಲ್ಲಿ ಗೊಂದಲಮಯವಾಗಿವೆ. ವಿಜ್ಞಾನ ಮತ್ತು ತಂತ್ರಜ್ಞಾನದ ಮಹತ್ಸಾಧನೆ ಮತ್ತು ಅವುಗಳ ಯುಕ್ತಾಯುಕ್ತತೆಯ ಅಂತರಾರ್ಥಗಳನ್ನು ಧಾರ್ಮಿಕ ನಂಬಿಕೆಗಳೊಂದಿಗೆ ಹೊಂದಾಣಿಕೆ ಮಾಡುವುದು ತೊಡಕಿನ ಕೆಲಸವಾಗಿದೆ. ವಿಜ್ಞಾನವು, ಇಂದ್ರಿಗೋಚರ ಸಂಗತಿಗಳ ಕಡೆಗೆ ದೃಷ್ಟಿಯಿಟ್ಟರೆ ತತ್ವಶಾಸ್ತ್ರವು, ಪ್ರತ್ಯಕ್ಷಗೋಚರವಾದ ಎಲ್ಲ ಪದಾರ್ಥಗಳ ಅಂತಿಮ ಅಥವಾ ಮೂಲಭೂತವಾದ ಸತ್ಯವನ್ನು ಅನ್ವೇಷಿಸುತ್ತದೆ. ವೈಜ್ಞಾನಿಕ ಸತ್ಯವು, ಹಿಂದಿನ ಸಿದ್ಧಾಂತದ ಬದಲಿಗೆ ಹೊಸ ಸಿದ್ಧಾಂತ ಬರುವ ತನಕ ಇರಬಹುದಾದ ತಾತ್ಕಾಲಿಕ ಸತ್ಯ ಮಾತ್ರವಾಗಿರುತ್ತದೆ.

ಹಲವಾರು ಧಾರ್ಮಿಕವೆನಿಸಿಕೊಳ್ಳುವ ಅಥವಾ ಧರ್ಮದ ಹೆಸರಿನಲ್ಲಿ ಆಚರಿಸಲ್ಪಡುವ ಆಚರಣೆಗಳು, ಅಂಧಶ್ರದ್ಧೆಗಳು, ರೂಢಿನಿಯಮಗಳು, ಅಸಂಬದ್ಧ ವಾತಾವರಣವನ್ನು ಸೃಷ್ಟಿಸಿ, ಧರ್ಮಾಚರಣೆಯು ಕೇವಲ ಸಮಾಜದ ಒಂದು ಪಂಗಡದ ಸ್ವತ್ತು ಎನ್ನುವ ಆಪಾದನೆಗೆ ಗುರಿಯಾಗಿದೆ. ಯಾವುದೇ ಸಂಪ್ರದಾಯವಾಗಲೀ, ಆಚರಣೆಯಾಗಲೀ, ಬಹುತೇಕ ಅಸಂತುಷ್ಟಿ, ಅಸಮಾನತೆ, ಒಡಕು ಉಂಟುಮಾಡುವುದಾದರೆ, ಅಂತಹ ರೂಢಿಗಳನ್ನು, ಆಚರಣೆಗಳನ್ನು ಪರಿತ್ಯಾಗ ಮಾಡುವುದು ಆದ್ಯಕರ್ತವ್ಯ. ಇದಕ್ಕೆ ಶಾಸ್ತ್ರಗಳ ಆಜ್ಞೆಯೇ ಉಂಟು.

ಸೂತ್ರಕಾರರಾದ ಆಪಸ್ತಂಬ ಮಹರ್ಷಿಗಳು ಧರ್ಮದ ವಿಚಾರದಲ್ಲಿ ಶಿಷ್ಟಾಚಾರಕ್ಕೆ ಬಹಳ ಒತ್ತು ನೀಡುತ್ತಾರೆ. ಆಪಸ್ತಂಬ ಧರ್ಮಸೂತ್ರ ಗ್ರಂಥದ ಮೊದಲನೆಯ ಸೂತ್ರ ಹೀಗಿದೆ :

**ಧರ್ಮಜ್ಞಸಮಯಃ ಪ್ರಮಾಣಂ, ವೇದಾಶ್ಚ ॥** - ಆಪ - ಧ. ಸೂ. - I

ಧರ್ಮದ ವಿಚಾರದಲ್ಲಿ ವೇದಕ್ಕಿಂತಲೂ ಶಿಷ್ಟಾಚಾರಕ್ಕೆ ಪ್ರಥಮ ಸ್ಥಾನವನ್ನು ಅವರು ಕೊಟ್ಟಿದ್ದಾರೆ. ರಾಮಾಯಣ, ಮಹಾಭಾರತಗಳೂ ಇದೇ ಜಾಡಿನಲ್ಲಿ ಧರ್ಮವನ್ನು ವಿವೇಚಿಸುತ್ತವೆ.

ಮಾನವನ ಸರ್ವತೋಮುಖ ಅಭಿವೃದ್ಧಿಯೇ ಎಲ್ಲ ಧರ್ಮಗಳ ಮುಖ್ಯ ಗುರಿಯಾಗಿರುತ್ತದೆ. ಧರ್ಮವು ಸಾರ್ವತ್ರಿಕವಾದುದು. ಅದು ಒಂದು ಪಂಥ ಅಥವಾ ಪಂಗಡಕ್ಕೆ ಸೇರಿದುದಲ್ಲ. ಧರ್ಮದ ಈ ಸಾರ್ವತ್ರಿಕತೆ ಮತ್ತು ಆಧ್ಯಾತ್ಮ ಜ್ಞಾನ ಮತ್ತು ಅನುಭಾವಗಳ ಅನುಭವಕ್ಕೆ ಪ್ರಹ್ಲಾದರಾಯರ ಅವತಾರವಾದ ಮಂತ್ರಾಲಯದ ಶ್ರೀಗುರುರಾಘವೇಂದ್ರರ ಸಂದೇಶಗಳು ಜ್ವಲಂತ ಉದಾಹರಣೆಗಳಾಗಿವೆ.

ವ್ರತಗಳ ಆಚರಣೆಗಳು, ಸಮಾಜದ ಎಲ್ಲ ವರ್ಗಗಳಿಗೆ ಸಮಾನವಾಗಿ ವಿಧಿಸಲ್ಪಟ್ಟಿವೆ. ವ್ರತಾಚರಣೆ ಮಾನವ ಜೀವನದಲ್ಲಿ ದೈವೀಸಂಪತ್ತು ಮತ್ತು ಆತ್ಮಬಲದ ಆಹ್ವಾನದ ಪ್ರತೀಕ. ಇಂದ್ರಿಯಗಳು ಶಿಸ್ತು ಮತ್ತು ಸಂಯಮವನ್ನು ವರ್ಧಿಸುವಂತಹುದು.

ವ್ರತಾಚರಣೆಗಳು ನಮಗೆ ಆತ್ಮಬಲವನ್ನು ಕೊಡುವುದರ ಮೂಲಕ ಭಗವಂತನ ಕೃಪೆಯನ್ನೂ ದೊರಕಿಸಿಕೊಡುತ್ತವೆ. ಇದರ ಜೊತೆಗೆ ನೆಮ್ಮದಿಗೆ ಬೇಕಾದ ಪೂರ್ವರಂಗದ ಸಿದ್ಧತೆಯನ್ನು ಕೊಡುತ್ತದೆ. ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳಿರುವುದನ್ನು ನಾವು ಮೆಲುಕು ಹಾಕುತ್ತಿರಬೇಕು :

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿಃ ಅಶಾಂತಸ್ಯ ಕುತಃ ಸುಖಮ್ ॥** - ಭ.ಗೀ. - ೨-೬೬

ನೆಮ್ಮದಿ ಇಲ್ಲದವನಿಗೆ ಸುಖವೆಲ್ಲಿಂದ ಬರಬೇಕು. ನೆಮ್ಮದಿಯು ಒಳ್ಳೆಯ ಭಾವನೆಗಳಿಂದ ಬರುತ್ತದೆ. ಒಳ್ಳೆಯ ಭಾವನೆ, ಮನಸ್ಸು ಮತ್ತು ಇಂದ್ರಿಯಗಳ ಸಂಯಮದಿಂದ ಬರುತ್ತದೆ. ಆ ಸಂಯಮ ಮತ್ತು ಚಿತ್ತಶುದ್ಧಿಯು ವ್ರತಾದಿಗಳ ಆಚರಣೆಯಿಂದ ದೊರಕುತ್ತದೆ. ಆದ್ದರಿಂದ ಲೌಕಿಕ ಮತ್ತು ಅಲೌಕಿಕ ಆನಂದಗಳನ್ನು ನೀಡುವ ವ್ರತಾದಿಗಳನ್ನು ಶ್ರದ್ಧೆಯಿಂದ ಆಚರಿಸಬೇಕು.

ದೈನಿಕ, ಪಾಕ್ಷಿಕ, ಮಾಸಿಕ, ವಾರ್ಷಿಕ, ಪಂಚವಾರ್ಷಿಕ ಹೀಗೆ ವಿವಿಧ ಅವಧಿಗಳ ವ್ರತಗಳನ್ನು ನಮ್ಮ ಹಿರಿಯರು ಆಚರಿಸುತ್ತಿದ್ದುದು ನಮಗೆಲ್ಲಾ ನೋಡಿ ರೂಢಿ. ಆದರೆ ಇಂದಿನ ಕಾಲಮಾನದ ಪರಿಸ್ಥಿತಿಯನ್ನು ಗಮನಿಸಿದರೆ ಧರ್ಮಾಚರಣೆಯಲ್ಲಿ ತೊಡಗುವುದು ಎಷ್ಟು ಕ್ಲಿಷ್ಟ ಎನ್ನುವುದು ಸ್ವಯಂವಿದಿತ. ಅದಕ್ಕೆ ಹಲವಾರು ಕಾರಣಗಳಿವೆ. ಸಮಯಾಭಾವ, ಜೀವನೋಪಾಯದ ಕೆಲಸದ ಒತ್ತಡ, ಸ್ಥಳ, ಸಮಯ, ಮಾರ್ಗದರ್ಶನಗಳ ಅಭಾವ, ಯಾವ ಸಾಮಗ್ರಿಗಳನ್ನು ತರಬೇಕು? ಅವುಗಳನ್ನು ಹೇಗೆ ಹೊಂದಿಸಬೇಕು? ಎನ್ನುವ ಗೊಂದಲ..... ಹೀಗೆಯೇ ಅನಾನುಕೂಲಗಳ ಪಟ್ಟಿ ಮುಂದುವರೆಯುತ್ತದೆ. ಈ ವಿಪರ್ಯಾಸ-ವನ್ನು ದೂರ ಮಾಡುವ ದಿಸೆಯಲ್ಲಿ ಮಂತ್ರಾಲಯದ ಶ್ರೀರಾಘವೇಂದ್ರಸ್ವಾಮಿಗಳವರ ಮಠವು **“ವ್ರತಮುಕ್ತಾವಲೀ”** ಎಂಬ ಗ್ರಂಥವನ್ನು ಸಿದ್ಧಪಡಿಸಿರುವುದು ಅತ್ಯಂತ ಶ್ಲಾಘನೀಯವಾದ ಕಾರ್ಯ. ಪೂಜಾಸಾಮಗ್ರಿಗಳನ್ನು ಒಟ್ಟಾಗಿಸಿಕೊಳ್ಳುವುದರಿಂದ ಹಿಡಿದು, ವ್ರತೋದ್ಯಾಪನ-ದವರೆಗಿನ ವಿಧಿಗಳನ್ನು ಒಟ್ಟಾಗಿ ಸೇರಿಸಿ, ಸರಳವಾಗಿ ವಿಶದಪಡಿಸಿರುವ ಕ್ರಮವು ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸಿದೆ. ಇದೊಂದು ಅಪೂರ್ವವಾದ ಸಂಕಲನ. ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನವಾದ ಶ್ರೀರಾಘವೇಂದ್ರಸ್ವಾಮಿಗಳವರ ಮಠದ ಪೀಠಾಧಿಪತಿಗಳಾದ ಶ್ರೀಸುಶಮೀಂದ್ರತೀರ್ಥ ಶ್ರೀಪಾದಂಗಳವರು ಈ ಪುಸ್ತಕದ ಪ್ರಕಟಣೆ-ಯನ್ನು ಮಾಡಿಸಿ, ಸಮಾಜಕ್ಕೆ ಅತ್ಯಂತ ಉಪಕಾರವನ್ನು ಮಾಡಿದ್ದಾರೆ. ಇದಕ್ಕಾಗಿ ಶ್ರಮಿಸಿರುವ ವಿದ್ವಾಂಸರು ವಂದನೀಯರು. ಸಮಾಜದ ಎಲ್ಲ ಸ್ತರದ ಜನತೆಗೆ ಉಪಯುಕ್ತವಾಗಿರುವ ಈ ಗ್ರಂಥವು ಆಂಗ್ಲಭಾಷೆಯಲ್ಲಿಯೂ ಅನುವಾದಿತವಾಗಿ ಇನ್ನೂ ಹೆಚ್ಚಿನ ಜನಪ್ರಿಯತೆಯನ್ನು ಗಳಿಸಿಕೊಳ್ಳಲಿ ಎಂದು ನನ್ನ ಸದಾಶಯ.

**ಎಂ.ಎನ್. ವೆಂಕಟಾಚಲಯ್ಯ**

ಸರ್ವೋಚ್ಚ ನ್ಯಾಯಾಲಯದ ಮುಖ್ಯನ್ಯಾಯಾಧೀಶರು (ವಿಶ್ರಾಂತ)

# ಪ್ರಕಾಶಕರ ನುಡಿ

ಶಾಸ್ತ್ರ ಸಂಪ್ರದಾಯ ಪದ್ಧತಿಗಳಲ್ಲಿ ಇಡೀ ವಿಶ್ವದಲ್ಲೇ ಭಾರತಕ್ಕೆ ಅತ್ಯಂತ ಗೌರವಯುತ ಸ್ಥಾನ, ಅಂತಲೇ ಭರತಖಂಡವನ್ನು ವಿದೇಶೀಯರು ದೇವತೆಗಳ ನಾಡು ಎಂದು ಕರೆದಿದ್ದು. ಸತತ ಎರಡು ಶತಮಾನಗಳ ಪರದೇಶಿ ದಬ್ಬಾಳಿಕೆಯಿದ್ದರೂ, ನಮ್ಮ ತತ್ವಶಾಸ್ತ್ರಗಳು, ಸಂಪ್ರದಾಯ-ಗಳು, ವ್ರತಗಳು ಇನ್ನೂ ಆಚರಣೆಯಲ್ಲಿವೆ ಎಂದರೆ ಅದಕ್ಕೆ ನಮ್ಮ ಹಿರಿಯರ ಭದ್ರ ಬುನಾದಿಯೇ ಕಾರಣವಲ್ಲವೇ? ಪ್ರಾಚೀನ ಕಾಲದಿಂದಲೂ ನಡೆದುಬರುತ್ತಿರುವ ಈ ಪದ್ಧತಿಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಕಂಡರೂ ಎಲ್ಲಿಯೂ ಮೂಲ ಆಚರಣೆಗೆ ಧಕ್ಕೆ ಬರಲಿಲ್ಲ. ಈ ಆಚರಣೆಗಳು ನಮ್ಮ ಮುಂದಿನ ಪೀಳಿಗೆಗೂ ಉಳಿಯುವಂತೆ ಮಾಡುವುದು ಮಠ-ಮಂದಿರ ಹಾಗೂ ನಮ್ಮ ಹಿರಿಯರ ಆದ್ಯಕರ್ತವ್ಯವಾಗಿರುತ್ತದೆ. ಈ ನಿಟ್ಟಿನಲ್ಲಿ ಮಂತ್ರಾಲಯ ಶ್ರೀರಾಘವೇಂದ್ರಸ್ವಾಮಿ-ಗಳವರ ಮಠವು ಅನೇಕ ಪ್ರಯತ್ನಗಳನ್ನು ಮಾಡಿದೆ. ಈ ಹಿಂದೆ ತಾರಣನಾಮ ಸಂವತ್ಸರದ ಪಂಚಾಂಗದೊಂದಿಗೆ ನಾವು ಮುದ್ರಿಸಿದ 'ಧರ್ಮಶಾಸ್ತ್ರದರ್ಪಣ' ಎಂಬ ಗ್ರಂಥವು ಜನ-ಮನ ಮುಟ್ಟಿ ನಮ್ಮ ಶ್ರಮ ಫಲಿಸಿದುದಕ್ಕೆ ಕಾರಣೀಭೂತರು ನೀವೇ. ಆ ನಿಮ್ಮ ಅಭಿಮಾನದ ಅಲೆಗಳಲ್ಲಿ ಈಗ ಮತ್ತೊಂದು ಮುತ್ತನ್ನು ಹುಡುಕಿ ನಿಮ್ಮ ಕೈಗಿರಿಸಿದ್ದೇವೆ. ಅದೇ ಈ 'ವ್ರತಮುಕ್ತಾವಲೀ' ಎನ್ನುವ ಗ್ರಂಥ. ಅನೇಕ ವ್ರತಗಳನ್ನು ಈ ಗ್ರಂಥದಲ್ಲಿ ಸಂಗ್ರಹಿಸಲಾಗಿದೆ. ಇದರಲ್ಲಿ ಪೂಜೆ ಮಾಡುವ ವಿಧಾನವನ್ನು ಕಂಸಗಳಲ್ಲಿ ವಿವರಿಸಿರುವುದರಿಂದ ವ್ರತಾಚರಣೆ ಸುಲಭವಾದೀತು. ಇನ್ನು ಮರದ ಬಾಗಿನ ಕೊಡುವ ಕ್ರಮ, ಅದರಲ್ಲಿ ಹಾಕುವ ವಸ್ತುಗಳು, ವಾಯನದಾನ ಕೊಡುವ ಕ್ರಮ, ಗೋಕುಲ ಮಾಡುವ ಕ್ರಮ - ಹೀಗೆ ಸವಿಸ್ತಾರವಾಗಿ ಬೃಹತ್ ರೂಪದಲ್ಲಿ ಈ ಕುಸುಮವನ್ನು ನಿಮಗೆ ಅತ್ಯಂತ ಸಂತೋಷದಿಂದ ನೀಡುತ್ತಿದ್ದೇವೆ. ಈ ಸಂಶೋಧನಾಕಾರ್ಯದಲ್ಲಿ ಹಗಲಿರುಳು ಶ್ರಮಿಸಿ ಗ್ರಂಥವನ್ನು ಸಿದ್ಧಪಡಿಸಿಕೊಟ್ಟವರು ನಮ್ಮ ಮಠದ ಶಿಷ್ಯರಾದ ವಿದ್ವಾನ್. ವೇಂಕಟನರಸಿಂಹಾಚಾರ್ಯ ರಾಜಪುರೋಹಿತ್ ರವರು. ಇವರ ಶ್ರಮಕ್ಕೆ ನಾನು ಎಂದೆಂದೂ ಆಭಾರಿ ಆಗಿದ್ದೇನೆ ಹಾಗೂ ಇವರಿಗೆ ಸಹಾಯಹಸ್ತ ನೀಡಿ ಶ್ರೀಮಠದ ಸಂಪ್ರದಾಯಗಳನ್ನು ತಿಳಿಸಿದ ವಿದ್ವಾನ್ ಬಿ.ಕೆ. ವಿಜಯವಿಠ್ಠಲಾಚಾರ್ಯರಿಗೂ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ವ್ರತಮುಕ್ತಾವಲೀಯಲ್ಲಿ ಆಯಾ ವ್ರತಗಳ ಕಥೆಯನ್ನು ಕೂಡಾ ವ್ರತದ ನಂತರದಲ್ಲಿ ನೀಡಲಾಗಿದೆ. ಇದಕ್ಕೆ ವಿದ್ವಾನ್ ಚತುರ್ವೇದಿ ವೇದವ್ಯಾಸಾಚಾರ್ಯರ 'ಚೈತ್ರಾದಿಮಾಸ ಕರ್ತವ್ಯಗಳು'

ಎಂಬ ಪುಸ್ತಕದಿಂದ ಮಾಹಿತಿಗಳನ್ನು ಸಂಗ್ರಹಿಸಿದ್ದೇವೆ. ಅದಕ್ಕಾಗಿ ಶ್ರೀಯುತ ಆಚಾರ್ಯರಿಗೆ ನನ್ನ ಅನಂತಾನಂತ ವಂದನೆಗಳನ್ನು ಸಲ್ಲಿಸುತ್ತೇನೆ.

ಇವಿಷ್ಟು ಒಂದು ಭಾಗವಾದರೆ, ಡಿ.ಟಿ.ಪಿ. ಕಾರ್ಯದ್ದೇ ಒಂದು ಭಾಗ. ಅದರಲ್ಲಿ ನಮ್ಮ ಶ್ರೀಗುರುಸಾರ್ವಭೌಮ ಮಾಸಪತ್ರಿಕೆಯ ಈ ವಿಭಾಗವು ಅಚ್ಚುಕಟ್ಟಾಗಿ ಕಾರ್ಯ ಮುಗಿಸಿದುದರ ಫಲವೇ ಈ ಗ್ರಂಥ.

**'ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ'** ಎನ್ನುವ ಹಾಗೆ ನಮ್ಮ ಎಲ್ಲ ಇಂದ್ರಿಯ-ಗಳಲ್ಲಿ ಕಣ್ಣಿಗೆ ಪ್ರಾಧಾನ್ಯತೆ ಹೇಗೋ ಹಾಗೆ ಈ ಉದ್ಗ್ರಂಥಕ್ಕೆ ಮುಖಪುಟವೂ ಅತ್ಯಂತ ಮುಖ್ಯವಾದುದು. ಈ ದಿಶೆಯಲ್ಲಿ ಶ್ರೀರಘುನಂದನ ಶರ್ಮರವರ ವಿನ್ಯಾಸ ಸುಂದರವಾಗಿ ಮೂಡಿಬಂದಿದೆ.

ಪುಸ್ತಕರೂಪವಾಗಿ ಹೊರಬರಲು ಶ್ರಮಿಸಿದ ಶ್ರೀಸೂರೀಂದ್ರಕುಮಾರ್ ಹಾಗೂ ಶ್ರೀಗುರುಸಾರ್ವಭೌಮ ಮಾಸಪತ್ರಿಕೆಯ ಸಂಪಾದಕರಾದ ಕಡಪ. ರಾಘವೇಂದ್ರಾಚಾರ್ಯ ಹಾಗೂ ಪಿ.ವಿ. ಹರಿನಾಥ್‌ರವರಿಗೂ ಮತ್ತು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಲಿಂಗಪ್ಪನವರಿಗೂ ಶ್ರೀರಾಘವೇಂದ್ರಗುರುಸಾರ್ವಭೌಮರು ಆಯುರಾರೋಗ್ಯಗಳನ್ನು ಕರುಣಿಸಲಿ ಎಂದು ಪ್ರಾರ್ಥಿಸುತ್ತಾ, ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನವಾದ ಶ್ರೀರಾಘವೇಂದ್ರಸ್ವಾಮಿಗಳವರ ಮಠದ ಎಲ್ಲ ಕಾರ್ಯಗಳನ್ನು ಪ್ರೋತ್ಸಾಹಿಸುತ್ತಾ ಬಂದಿರುವ ಜಿಜ್ಞಾಸುವೃಂದಕ್ಕೆ ಮತ್ತೊಮ್ಮೆ ಶಿರಸಾಷ್ಟಾಂಗ ನಮಸ್ಕಾರಗಳನ್ನು ಮಾಡುತ್ತಾ ವಿರಮಿಸುತ್ತಿದ್ದೇನೆ.

ಮಂತ್ರಾಲಯ
೨೭-೦೩-೨೦೦೫
ಶ್ರೀಸುಧೀಂದ್ರತೀರ್ಥರ ಆರಾಧನೆ

ಇತಿ ಸಜ್ಜನ ವಿಧೇಯ
**ರಾಜಾ. ಎಸ್. ರಾಜಗೋಪಾಲಾಚಾರ್ಯ**
ಶ್ರೀಪಾದಂಗಳವರ ಆಪ್ತಕಾರ್ಯದರ್ಶಿಗಳು
ಶ್ರೀರಾಘವೇಂದ್ರಸ್ವಾಮಿಗಳವರ ಮಠ
ಮಂತ್ರಾಲಯ

ಶ್ರೀರಾಘವೇಂದ್ರತೀರ್ಥರು



# ಪರಿವಿಡಿ

4. ಕಲಶಪೂಜೆ ಮಾಡಿ, ಆ ನೀರನ್ನು ಕೇವಲ ದೇವರ ಪೂಜೆಗಾಗಿ ಉಪಯೋಗಿಸಬೇಕು. ಆಚಮನಕ್ಕೆ ಉಪಯೋಗಿಸಬಾರದು.

5. ಪೂಜೆಗಾಗಿ ಉಪಯೋಗಿಸಬೇಕಾದ ಹಾಲನ್ನು ಕಾಯಿಸಬಾರದು.

6. ಎಲ್ಲಾ ಪೂಜೆಗಳಲ್ಲೂ ಮೊದಲು ಮಹಾಗಣಪತಿಪೂಜೆಯನ್ನು, ನವಗ್ರಹಗಳ ಪೂಜೆಯನ್ನು ಮಾಡಬೇಕು.

7. ಮನೆಯಲ್ಲಿರುವ ಸಾಲಿಗ್ರಾಮ ಮೂರ್ತಿಗಳ ಪೂಜಾನಂತರವೇ ವ್ರತಾಂಗ ಪೂಜೆಗಳನ್ನು ಆರಂಭಿಸುವುದು ಸೂಕ್ತ.

8. ಯಾವ ಪೂಜೆ ಮಾಡುವುದಾದರೂ ಮೊದಲು ಗುರುಮಂತ್ರ - ತತ್ವನ್ಯಾಸ - ಮಾತೃಕಾನ್ಯಾಸಗಳನ್ನು ಮಾಡಲೇಬೇಕು. ಇದು ಶ್ರೀಮದಾಚಾರ್ಯರು ತೋರಿಸಿಕೊಟ್ಟ ದಾರಿ. ಇದರಿಂದ ನಾವು ಮಾಡುತ್ತಿರುವ ವ್ರತದ ಪೂರ್ಣಫಲ ದೊರೆಯುತ್ತದೆ.

## ಪೂಜೆಗೆ ಕೂಡುವ ಮುನ್ನ ಸಿದ್ಧಪಡಿಸಿಕೊಳ್ಳಬೇಕಾದ ಸಾಮಗ್ರಿಗಳು

1. ಅರಿಷಿಣ, ಕುಂಕುಮ, ಮಂತ್ರಾಕ್ಷತೆ

2. **ಪತ್ರೆಗಳು :** ಭೃಂಗರಾಜ ಪತ್ರೆ, ಬಿಲ್ವಪತ್ರೆ, ಶಮೀ (ಬನ್ನಿ) ಪತ್ರೆ, ಉತ್ತರಣೆ ಪತ್ರೆ, ಕಣಗಿಲೆ ಪತ್ರೆ, ಬಿಳಿಎಕ್ಕೆ ಪತ್ರೆ, ದಾಳಿಂಬೆ ಪತ್ರೆ, ಮರುಗ ಪತ್ರೆ, ದವನ ಪತ್ರೆ, ಅಶ್ವತ್ಥ ಪತ್ರೆ, ಜಾಜಿ ಪತ್ರೆ, ಕೇದಿಗೆ ಪತ್ರೆ, ಚೊಗಚೆ ಪತ್ರೆ, ಮಲ್ಲಿಗೆ ಪತ್ರೆ, ಬೋರೆ ಪತ್ರೆ, ವಿಷ್ಣುಕ್ರಾಂತಿ, ದೇವದಾರು, ಉಮ್ಮತ್ತಿ, ಶ್ರೀತುಳಸಿ.

ಅಕ್ಕಿ, ಬಾಳೆಎಲೆಗಳು, ತೋರಣ ಮತ್ತು ಬಾಳೆಕಂಬ, ಅಡಿಕೆ, ಉತ್ತತ್ತಿ, ಒಣಕೊಬ್ಬರಿ.

**ಕಲಶದಲ್ಲಿ ಹಾಕುವ ಪಂಚಪಲ್ಲವಗಳು :** ಅಶ್ವತ್ಥ, ಅತ್ತಿ, ಗೋಳಿ (ಬಸರಿಗಿಡ), ಮಾವು, ಆಲ.

3. **ಪುಷ್ಪಗಳು :** ಶತಪತ್ರಪುಷ್ಪ, ಪದ್ಮ, ಕುಮುದ, ನಂದ್ಯಾವರ್ತ (ನಂದಿಬಟ್ಟಲು), ಚಂಪಕ (ಸಂಪಿಗೆ) ಬಕುಲ (ನಾಗಕೇಸರ), ಮಲ್ಲಿಕಾ (ಮಲ್ಲಿಗೆ ಹೂ), ಕರ್ಣಿಕಾರ (ಬೆಟ್ಟಕಣಗಿಲೆ), ಜಾತಿ (ಜಾಜಿ ಹೂ), ಭೃಂಗರಾಜ (ಗರುಗ), ಕರವೀರ (ಕಣಗಿಲೆ), ಜಪಾಪುಷ್ಪ (ಕೆಂಪು ದಾಸವಾಳ), ಸೇವಂತಿಕಾ (ಸೇವಂತಿಗೆ), ಧತ್ತೂರ (ಉಮ್ಮತ್ತಿ ಪುಷ್ಪ), ಪಾಟಲೀ (ಹಸಿರು ಪಾದರಿ ಹೂ), ಪುನ್ನಾಗಪುಷ್ಪ (ಹೊನ್ನೆ), ಕೇತಕೀ (ಕೇದಿಗೆ), ದ್ರೋಣ (ತುಂಬೆ), ಅಶೋಕ (ಅಶೋಕ ಹೂ), ವಿಷ್ಣುಕ್ರಾಂತಿ (ವಿಷ್ಣುಕ್ರಾಂತಿ), ಗಿರಿಮಲ್ಲಿಕಾ (ಬೆಟ್ಟದ ಮಲ್ಲಿಗೆ), ಕುಂದ (ಮಲ್ಲಿಗೆ)

---

**ಸೂಚನೆ :** ಭೃಂಗರಾಜ (ಕಾಡಿಗ್ಗರಗು), ಶಮಿ, ಅಪಾಮಾರ್ಗ, ಕರವೀರ, ಅರ್ಕ, ದಾಡಿಮಿ, ಮರುವಕ, ಜಾತಿ, ಅತಸಿ, ಮಾಲತಿ, ಬದರಿ, ವಿಷ್ಣುಕ್ರಾಂತಿ, ದೇವದಾರು, ಧತ್ತೂರ, ದೂರ್ವಾ.

4. ಮಣೆ, ಚಾಪೆ, ಗಂಟೆ, ಹಲಗಾರತಿ, ಆರತಿ ತಟ್ಟೆ, ಪಂಚಪಾತ್ರೆ, ಉದ್ಧರಣೆ, ತಂಬಿಗೆ (ನೀರು ತುಂಬಿದ್ದು), ಧೂಪಾರತಿ ಪಾತ್ರೆ, ಚಿಲ್ಲರೆ ಹಾಕಿಡಲು ಪಾತ್ರೆ, ಜಾಗಟೆ, ಅರ್ಘ್ಯಪಾತ್ರೆ, ಹಿತ್ತಾಳೆ ಬುಟ್ಟಿ, ಪುಷ್ಪಕ್ಕಾಗಿ ಬುಟ್ಟಿ, ತುಳಸಿಗಾಗಿ ಪಾತ್ರೆ, ಪಂಚಫಲಗಳನ್ನಿಡಲು ಪಾತ್ರೆ, ದೀಪದ ಕಂಬಗಳು, ಎಣ್ಣೆ, ತುಪ್ಪ, ಮಂಟಪ ಇತ್ಯಾದಿ.

5. ಊದುಬತ್ತಿ, ಹೂಬತ್ತಿ, ಮಂಗಳಾರತಿ ಬತ್ತಿ, ಎಳೆಬತ್ತಿ, ಆರತಿ-ಕರ್ಪೂರ, ಗೆಜ್ಜೆವಸ್ತ್ರ.

6. **ಪಂಚಾಮೃತ ಸಾಮಗ್ರಿಗಳು** : ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಫಲಗಳು (ಹಣ್ಣುಗಳು), ಎಳನೀರು, ದ್ರಾಕ್ಷಿ, ಗೋಡಂಬಿ, ಬಾದಾಮಿ, ಉತ್ತತ್ತಿ, ಕಲ್ಲುಸಕ್ಕರೆ.

7. **ನೈವೇದ್ಯ** : ನಾನಾ ವಿಧದ ಫಲಗಳು, ತೆಂಗಿನಕಾಯಿ, ಆಹಾರ ಪದಾರ್ಥಗಳು, 21 ಮೋದಕ, ಬೇಲದ ಹಣ್ಣು, ನೇರಳೆಹಣ್ಣು ಇತ್ಯಾದಿ.

8. **ತಾಂಬೂಲ** : ವೀಳ್ಯದೆಲೆ, ಅಡಿಕೆ, ಕಾಚು, ಸುಣ್ಣ, ಲವಂಗ, ಯಾಲಕ್ಕಿ, ಜಾಕಾಯಿ, ಪತ್ರೆ, ಪಚ್ಚಕರ್ಪೂರ, ಕೇಸರಿ.

9. ದಕ್ಷಿಣೆ

10. **ವಾಯನ ದಾನಕ್ಕೆ ಬೇಕಾಗುವ ಪದಾರ್ಥಗಳು** : ಎರಡು ತೆಂಗಿನಕಾಯಿ, 1/2 ಸೇರು ಅಕ್ಕಿ, ವೀಳ್ಯದೆಲೆ, ಅಡಿಕೆ, ದಕ್ಷಿಣೆ, ಎರಡು ಬಾಳೆಎಲೆ.

11. **ಮೊರದ ಬಾಗಿನದಲ್ಲಿ ಹಾಕುವ ಸಾಮಗ್ರಿಗಳು** : ಎರಡು ಮೊರಗಳು, ಅರಿಷಿಣದ ಬಟ್ಟಲು, ಕುಂಕುಮದ ಬಟ್ಟಲು, ಕಾಡಿಗೆ, ಹಣಿಗೆ, ಅಕ್ಕಿ (1 ಕೆ.ಜಿ.), ತೆಂಗಿನಕಾಯಿ, ಕಾಲುಂಗುರ (ಬೆಳ್ಳಿ), ಮಾಂಗಲ್ಯ, ಕನ್ನಡಿ, ರವಿಕೆ ಖಣ, ತಾಂಬೂಲ (ಐದಕ್ಕಿಂತ ಕಡಿಮೆ ವೀಳ್ಯದೆಲೆ ಇಡಬಾರದು), ಕರಿಮಣಿ ಕುಚ್ಚು, ಬಳೆ - ಬಿಚ್ಚೋಲೆ, ಉದ್ದಿನಬೇಳೆ (1/4 ಕೆ.ಜಿ.), ಕಡಲೇಬೇಳೆ (1/4 ಕೆ.ಜಿ.), ಹೆಸರುಬೇಳೆ (1/4 ಕೆ.ಜಿ.), ತೊಗರಿಬೇಳೆ (1/4 ಕೆ.ಜಿ.), ಎರಡು ಬೆಲ್ಲದ ಅಚ್ಚು, ಕಲ್ಲುಸಕ್ಕರೆ, ಉಪ್ಪು (1/4 ಕೆ.ಜಿ.), ಹುಣಸೇಹಣ್ಣು (1/4 ಕೆ.ಜಿ.), ಜೀರಿಗೆ (50 ಗ್ರಾಂ.), ಕಾಳುಮೆಣಸು (50 ಗ್ರಾಂ.), ಮೆಂತ್ಯ (50 ಗ್ರಾಂ.), ಸಾಸುವೆ (50 ಗ್ರಾಂ.), ಅರಿಷಿಣ ಬೇರು, ಬತ್ತಿಕಟ್ಟು-1, ಹಣ್ಣು, ದಕ್ಷಿಣೆ, ಹೂ.



ಸೂಚನೆ : ಎಲ್ಲಾ ವ್ರತಗಳಲ್ಲಿ ಪುರುಷರಿಗೆ "ವಾಯನದಾನ"ವನ್ನು, ಅದರಂತೆ ದೇವತಾಪೂಜೆಗಳಲ್ಲಿ ಮುತ್ತೈದೆಯರು ಮೊರದ ಬಾಗಿನವನ್ನು "ಸುವಾಸಿನೀ ಸ್ತ್ರೀಯರಿಗೆ" ಕೊಡತಕ್ಕದ್ದು.

# ॥ ಇಂದ್ರಧ್ವಜಪೂಜಾಪದ್ಧತಿಃ ॥

## (ಚೈತ್ರಮಾಸ ಶುಕ್ಲಪಕ್ಷ ಪ್ರತಿಪದ)

ಚೈತ್ರ ಶುಕ್ಲ ಪ್ರತಿಪತ್ತಿನಲ್ಲಿ ಬೆಳಿಗ್ಗೆ ಮನೆಯನ್ನು ಗೋಮಯದಿಂದ ಸಾರಿಸಿ ರಂಗೋಲಿ-ತೋರಣ-ಬಾಳೇಕಂಬ ಇತ್ಯಾದಿಗಳಿಂದ ಅಲಂಕಾರ ಮಾಡಿ, ಯಜಮಾನನು ಪರಿವಾರಸಹಿತನಾಗಿ ತೈಲಾಭ್ಯಂಗಪೂರ್ವಕವಾಗಿ ಮಂಗಳಸ್ನಾನವನ್ನು ಮಾಡಿ, ತನ್ನ ನಿತ್ಯಕ್ರಿಯೆಗಳಾದ ಸಂಧ್ಯಾವಂದನೆ-ದೇವಪೂಜಾದಿಗಳನ್ನು ಮುಗಿಸಿ ನೂತನ ವಸ್ತ್ರಾಲಂಕಾರ-ಭೂಷಿತನಾಗಿ ಮನೆಯ ದ್ವಾರದೇಶದಲ್ಲಿ ಶಂಖ-ಚಕ್ರ-ಗದಾ-ಪದ್ಮ ಮೊದಲಾದ ವಿಷ್ಣುಚಿಹ್ನೆಗಳಿಂದಲೂ, ಕಲಶದ ಚಿತ್ರದಿಂದಲೂ ಕೂಡಿರತಕ್ಕಂತಹ ಕೆಂಪುಬಣ್ಣದ ಧ್ವಜವನ್ನು ಎತ್ತಿಹಿಡಿದು ಪೂಜೆ ಮಾಡಬೇಕು.

ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ । ಏವಂಗುಣವಿಶೇಷ-ವಿಶಿಷ್ಟಾಯಾಂ ಶುಭತಿಥೌ ಅಸ್ಮಿನ್‌ಪ್ರಾಪ್ತ ನೂತನ ಅಮುಕ ವತ್ಸರೇ ಅಸ್ಮದ್ಗೃಹೇ ಅಬ್ದಾಂತರ್ನಿತ್ಯಮಂಗಲಾವಾಪ್ತಿದ್ವಾರಾ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ವಿಷ್ಣುಪ್ರೀತ್ಯರ್ಥಂ ಧ್ವಜಾರೋಹಣಪೂರ್ವಕಂ ಇಂದ್ರಧ್ವಜಾಂತರ್ಗತ ಶ್ರೀಲಕ್ಷ್ಮೀನಾರಾಯಣಪೂಜನಂ, ತಥಾ ನಿಂಬಪತ್ರಭಕ್ಷಣಂಚ ಕರಿಷ್ಯೇ ॥

ಇಂದ್ರಧ್ವಜಾಂತರ್ಗತ ಶ್ರೀಲಕ್ಷ್ಮೀನಾರಾಯಣಾಯ ನಮಃ । ಇತಿ ಷೋಡಶೋಪಚಾರೈಃ ಸಂಪೂಜ್ಯ ಪ್ರಾರ್ಥಯೇತ್ ।

ಇಂದ್ರಧ್ವಜ ನಮಸ್ತೇಽಸ್ತು ಸರ್ವಾಭೀಷ್ಟಫಲಪ್ರದ ।
ಪ್ರಾಪ್ತೇಽಸ್ಮಿನ್ ವತ್ಸರೇ ನಿತ್ಯಂ ಮದ್ಗೃಹೇ ಮಂಗಲಂ ಕುರು ॥

(ಇಂದ್ರಧ್ವಜದ ಅಂತರ್ಗತನಾದ ಶ್ರೀಲಕ್ಷ್ಮೀನಾರಾಯಣನೇ ಎಲ್ಲರಿಗೂ ಸರ್ವಾಭೀಷ್ಟಗಳನ್ನು ಕೊಡುತ್ತಾ ಇರುವೆ. ಮುಂದೆ ಬರಲಿರುವ ವರ್ಷದಲ್ಲಿ ನನ್ನ ಮನೆಯಲ್ಲಿ ನಿತ್ಯವೂ ಮಂಗಳವನ್ನುಂಟುಮಾಡುವಂತೆ ಅನುಗ್ರಹಿಸು ಎಂದು ಪ್ರಾರ್ಥಿಸಬೇಕು)

ಇಂದ್ರಧ್ವಜಪೂಜೆಯ ನಂತರ ಮೆಣಸು, ಇಂಗು, ಹುಣಸೇಹಣ್ಣು, ಬೆಲ್ಲ ಇತ್ಯಾದಿಗಳಿಂದ ಸಂಸ್ಕಾರ ಮಾಡಲ್ಪಟ್ಟ ಬೇವಿನ ಹೂವನ್ನು ಸ್ವೀಕಾರ ಮಾಡಬೇಕು. ನಂತರ ದೈವಜ್ಞರನ್ನು ಪೂಜಿಸಿ ಅವರಿಂದ ಪಂಚಾಂಗದಲ್ಲಿರುವ ಸಂವತ್ಸರ-ರಾಜಾದಿ ಫಲಗಳನ್ನು ಶ್ರವಣಮಾಡಿ ಅವರಿಗೆ ಯಥಾಶಕ್ತಿ ದಕ್ಷಿಣಾದಿಗಳಿಂದ ಸಂತೋಷಪಡಿಸಬೇಕು.

ಈ ಧ್ವಜಾರೋಪಣವನ್ನು ಆಶ್ವಯುಜ ಶುಕ್ಲ ದಶಮೀಯ (ವಿಜಯದಶಮೀ) ದಿನ ಕೂಡಾ ಮಾಡಬೇಕು.

**ಬೇವು-ಬೆಲ್ಲ ಸ್ವೀಕಾರ ಮಾಡುವಾಗ ಹೇಳಬೇಕಾದ ಮಂತ್ರ :**

ಶತಾಯುರ್ವಜ್ರದೇಹಾಯ ಸರ್ವಸಂಪತ್ಕರಾಯ ಚ ।
ಸರ್ವಾರಿಷ್ಟ ವಿನಾಶಾಯ ನಿಂಬಕಂದಲಭಕ್ಷಣಮ್ ॥

॥ ಇತಿ ಇಂದ್ರಧ್ವಜಪೂಜಾಪದ್ಧತಿಃ ಸಂಪೂರ್ಣಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥



## ಮಾಸ, ಋತು ಮತ್ತು ಮಾಸಾಭಿಮಾನಿದೇವತೆಗಳು

| | | |
|---|---|---|
| ಚೈತ್ರ-ವೈಶಾಖ | ವಸಂತಋತು | ವಿಷ್ಣು-ಮಧುಸೂದನ |
| ಜ್ಯೇಷ್ಠ-ಆಷಾಢ | ಗ್ರೀಷ್ಮಋತು | ತ್ರಿವಿಕ್ರಮ-ವಾಮನ |
| ಶ್ರಾವಣ-ಭಾದ್ರಪದ | ವರ್ಷಋತು | ಶ್ರೀಧರ-ಹೃಷೀಕೇಶ |
| ಆಶ್ವಯುಜ-ಕಾರ್ತೀಕ | ಶರದ್‌ಋತು | ಪದ್ಮನಾಭ-ದಾಮೋದರ |
| ಮಾರ್ಗಶಿರ-ಪುಷ್ಯ | ಹೇಮಂತಋತು | ಕೇಶವ-ನಾರಾಯಣ |
| ಮಾಘ-ಫಾಲ್ಗುಣ | ಶಿಶಿರಋತು | ಮಾಧವ-ಗೋವಿಂದ |

## ನವಗ್ರಹಸ್ತೋತ್ರಮ್

ಸೂರ್ಯಃ ಶೌರ್ಯಮಥೇಂದುರಿಂದ್ರಪದವೀಂ ಸನ್ಮಂಗಲಂ ಮಂಗಲಃ
ಸದ್ಬುದ್ಧಿಂ ಚ ಬುಧೋ ಗುರುಶ್ಚ ಗುರುತಾಂ ಶುಕ್ರಃ ಶುಭಂ ಶಂ ಶನಿಃ ।
ರಾಹುರ್ಬಾಹುಬಲಂ ಕರೋತು ವಿಜಯಂ ಕೇತುಃ ಕುಲಸ್ಯೋನ್ನತಿಂ
ನಿತ್ಯಂ ಪ್ರೀ(ಭೂ)ತಿಕರಾ ಭವಂತು ಭವತಾಂ ಸರ್ವೇನುಕೂಲಾ ಗ್ರಹಾಃ ॥

# ।। ಗೌರೀ ತೃತೀಯಾ ।।

## (ಚೈತ್ರ ಶುದ್ಧ ತದಿಗೆ)

**ಪೀಠಿಕೆ :**

ಗೌರೀಪೂಜೆಯನ್ನು ಸುಮಂಗಲೀ ಸ್ತ್ರೀಯರು ಅವಶ್ಯ ಆಚರಿಸಲೇಬೇಕು. ಮಂಗಳದೇವತೆಯಾದ ಗೌರಿಯ ಪೂಜೆಯಿಂದ ಜಗನ್ಮಂಗಳದೇವತೆಗಳಾದ ಲಕ್ಷ್ಮೀ-ನಾರಾಯಣರ ಅನುಗ್ರಹವಾಗುತ್ತದೆ. ಚೈತ್ರ ಶುದ್ಧ ತದಿಗೆಯ ದಿನ ಸುಮಂಗಲಿ ಸ್ತ್ರೀಯರು ಗೌರಿಯನ್ನು ಕೂಡಿಸುತ್ತಾರೆ. ಜೊತೆಗೆ ಗಂಗೆಯನ್ನು ಪೂಜಿಸುವ ಸಂಪ್ರದಾಯವಿದೆ. ಅಷ್ಟೇ ಅಲ್ಲದೆ, ಚಿಕ್ಕ ಹಿತ್ತಾಳೆಯ ಪಾತ್ರೆ ಅಥವಾ ಮಣ್ಣಿನ ಹಣತೆಯಲ್ಲಿ ಶುದ್ಧೀಕರಿಸಿದ ಮಣ್ಣನ್ನು ಸಂಗ್ರಹಿಸಿ, ಜಲಸೇಚನ ಮಾಡಿ ಭತ್ತವನ್ನು ಹಾಕುತ್ತಾರೆ. ಬಿತ್ತಿದ ಬೆಳೆಯು ಎರಡು ವಾರಗಳಲ್ಲಿ ಚೆನ್ನಾಗಿ ಬೆಳೆದು ಹಸುರಾಗಿ ಕಂಡರೆ ನೋಡುವವರಿಗೆ ಆನಂದವಾಗುತ್ತದೆ. ಇದನ್ನು ಅಂಕುರಾರೋಪಣವೆಂದು ಕರೆಯುತ್ತಾರೆ. ಬೆಳೆಯು ಚೆನ್ನಾಗಿ ಕಂಡರೆ ಆ ವರ್ಷ ಮಳೆ-ಬೆಳೆ ಚೆನ್ನಾಗಿ ಆಗುವುದೆಂದು ಜನರ ನಂಬಿಕೆಯಾಗಿದೆ. ಹೊಸತಾಗಿ ಮದುವೆಯಾದ ಹೆಣ್ಣುಮಕ್ಕಳು ಈ ಗೌರೀಪೂಜೆಯನ್ನು ನಿರಂತರ ಐದು ವರ್ಷಗಳವರೆಗೆ ಆಚರಿಸುತ್ತಾರೆ. ಸಂಜೆಯ ಸಮಯದಲ್ಲಿ ಮುತ್ತೈದೆಯರಿಗೆ ಕಾಲು ತೊಳೆದು ಮಂಗಳದ್ರವ್ಯಗಳನ್ನು ನೀಡಿ, ಗೌರಿಗೆ ನಿವೇದಿಸಿದ ಕೋಸಂಬರಿ ಮತ್ತು ಪಾನಕಗಳನ್ನು ಕೊಟ್ಟು ಮುತ್ತೈದೆಯರಿಂದ ಆಶೀರ್ವಾದ ಪಡೆಯುತ್ತಾರೆ. ಹೀಗೆ ಈ ವ್ರತವನ್ನು ಆಚರಿಸುವುದರಿಂದ ಮುತ್ತೈದೆಯರ ಅಂತರ್ಗತರಾದ ಗೌರೀ-ಹರರು ಸಂತುಷ್ಟರಾಗಿ ದೀರ್ಘಸೌಮಂಗಲ್ಯವನ್ನು ಕರುಣಿಸುವರು.

**ಆಚರಿಸುವ ವಿಧಾನ :**

ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ.........

ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಚೈತ್ರಗೌರ್ಯಂತರ್ಗತ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ಶ್ರೀಜಯಾಪತಿಸಂಕರ್ಷಣಪ್ರೇರಣಯಾ ಶ್ರೀಜಯಾಪತಿಸಂಕರ್ಷಣ-ಪ್ರೀತ್ಯರ್ಥಂ (ಪುರುಷರು ಗೌರಿಯನ್ನು ಸ್ಥಾಪಿಸುವುದಾದರೆ 'ಮದ್ಗೃಹಸ್ಥಾನಾಂ ಸ್ತ್ರೀಣಾಂ' ಎಂದು ಸಂಕಲ್ಪದಲ್ಲಿ ಸೇರಿಸಿಕೊಳ್ಳಬೇಕು) ಮಮ ಅಖಂಡಸೌಭಾಗ್ಯಪ್ರಾಪ್ತ್ಯರ್ಥಂ

ಪುತ್ರಪೌತ್ರಾಭಿವೃದ್ಧ್ಯರ್ಥಂ ಚೈತ್ರಶುಕ್ಲತೃತೀಯಾಮಾರಭ್ಯ ವೈಶಾಖಶುಕ್ಲತೃತೀಯಾಪರ್ಯಂತಂ ಪ್ರತ್ಯಹಂ ಯಥಾಶಕ್ತಿ ಆಂದೋಲಿಕಾ ಗೌರೀಪೂಜನಂ ಡೋಲೋತ್ಸವಂ ಚ ಕರಿಷ್ಯೇ ॥

ತದಂಗತ್ವೇನ ಕುಲಾಚಾರಪ್ರಾಪ್ತಗೌರೀಸ್ಥಾಪನಂ, ಅಂಕುರಾರೋಪಣಂ, ನಿರ್ವಿಘ್ನತಾಸಿದ್ಧ್ಯರ್ಥಂ, ಮಹಾಗಣಪತಿಪೂಜನಂ ಚ ಕರಿಷ್ಯೇ ॥ (ಎಂದು ಹೇಳಿ ಮಂತ್ರಾಕ್ಷತೆ-ನೀರು ಬಿಡಬೇಕು)

**ಅಥ ಗೌರೀಧ್ಯಾನಮ್ :**

ಕುಂಕುಮಾಗರುಲಿಪ್ತಾಂಗೀಂ ಸರ್ವಾಭರಣಭೂಷಿತಾಮ್ ।
ನೀಲಕಂಠಪ್ರಿಯಾಂ ಗೌರೀಂ ವಂದೇಽಹಂ ಮಂಗಲಾಹ್ವಯಾಮ್ ॥

**ಅಂಕುರಾರೋಪಣಮಂತ್ರಃ :**

ಏಷಾಮಾಪ್ಯಾಯನಃ ಸೋಮೋ ರಾಜಾ ಯೇ ಶೋಭನಾಃ ಸ್ಮೃತಾಃ ।
ಅಂಕುರಾರೋಪಣಂ ಕುರ್ವೇ ತೇಷಾಂ ಅಂಕುರತಾಪ್ತಯೇ ॥

॥ ಇತಿ ಶ್ರೀಚೈತ್ರಗೌರೀಪೂಜಾಪದ್ಧತಿ ಸಮಾಪ್ತಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥



## ಅಕ್ಷಯ ತೃತೀಯಾ

(ವೈಶಾಖ ಶುಕ್ಲಪಕ್ಷ ತದಿಗೆಯಂದು ಪರಶುರಾಮ ಜಯಂತೀ)

**ಶ್ಲೋಕಃ –** ಆದ್ಯೋ ರಾಮೋ ಜಾಮದಗ್ನ್ಯಃ ಕ್ಷತ್ರಿಯಾಣಾಂ ಕುಲಾಂತಕಃ ।
ಪರಶ್ವಧ ಧರೋ ದಾತಾ ಮಾತೃಹಾ ಮಾತೃಜೀವಕಃ ॥

ಸಮುದ್ರತೀರನಿಲಯೋ ಮಹೇಶಃಪಾಠಿತಾಖಿಲಃ ।
ಗೋತ್ರಾಣಕೃದ್ ಗೋಪ್ರದಾತಾ ವಿಪ್ರಕ್ಷತ್ರಿಯ ಕರ್ಮಕೃತ್ ॥

(ಈ ಮಂತ್ರದಿಂದ ವಿಷ್ಣು ಪ್ರತಿಮೆಯಲ್ಲಿ ಆವಾಹನೆ ಮಾಡಿ ಈ ದಿನದಂದು ಪರಶುರಾಮದೇವರನ್ನು ಪೂಜಿಸಬೇಕು)

**ಅರ್ಘ್ಯಮಂತ್ರಃ –**

ಜಮದಗ್ನಿ ಸುತೋ ವೀರ ಕ್ಷತ್ರಿಯಾಂತಕರ ಪ್ರಭೋ ।
ಗೃಹಾಣಾರ್ಘ್ಯಂ ಮಯಾದತ್ತಂ ಕೃಪಯಾ ಪರಮೇಶ್ವರ ॥
(ಈ ಮಂತ್ರದಿಂದ ಪರಶುರಾಮರಿಗೆ ಅರ್ಘ್ಯವನ್ನು ಕೊಡಬೇಕು)

**ವಿ.ಸೂ. : ಈ ದಿನದಂದು ವಿಶೇಷವಾಗಿ ಪರಮಾತ್ಮನಿಗೆ ಹಾಗೂ ಶ್ರೀಗುರುರಾಜರ ಬೃಂದಾವನಕ್ಕೆ ಗಂಧಲೇಪನ ಮಾಡುವುದರಿಂದ ಮೋಕ್ಷಜ್ಞಾನವು ಲಭಿಸುವುದು.**



# ।। ಮೃಣ್ಮಯ ವೃಷಭ ಪೂಜಾವಿಧಿಃ ।।

## ಮಣ್ಣೆತ್ತಿನ ಅಮಾವಾಸ್ಯೆ

## (ಜ್ಯೇಷ್ಠಮಾಸ ಕೃಷ್ಣಪಕ್ಷ ಅಮಾವಾಸ್ಯೆ)

**ಪೀಠಿಕೆ :**

ಮೃತ್ತಿಕಾ ವೃಷಭಪೂಜೆ ಜ್ಯೇಷ್ಠ ಬಹುಳ ಅಮಾವಾಸ್ಯೆಯಂದು ಮಣ್ಣಿನಿಂದ ತಯಾರಿಸಿದ ಎತ್ತುಗಳನ್ನು ಪೂಜಿಸಬೇಕು. ಭಾರತದೇಶವು ಕೃಷಿ ಪ್ರಧಾನವಾಗಿದ್ದು, ಮನುಷ್ಯನ ಆಹಾರ ಸಾಮಗ್ರಿಗಳು ಭೂಮಿಯಲ್ಲಿ ಹುಟ್ಟುವುದಾದರೆ ಭೂಮಿಯಲ್ಲಿ ಬೀಜ ಬಿತ್ತಲು, ಬಿತ್ತಿದ ಫಸಲು ಬಂದ ಮೇಲೆ ಧಾನ್ಯರೂಪದಿಂದ ನಾವು ಪಡೆಯಲು ಈ ವೃಷಭಗಳ ಸೇವೆ ಅತ್ಯಂತ ಅವಶ್ಯವಾಗಿದೆ. ವೃಷಭವು ಶಿವನ ವಾಹನವಾದ್ದರಿಂದ ಶಿವನು ನಂದೀಶನೆಂದೇ ಪ್ರಸಿದ್ಧನಾಗಿದ್ದಾನೆ. ಹೀಗೆ ಮಾನವನು ವೃಷಭಗಳಿಗೆ ಅತ್ಯಂತ ಕೃತಜ್ಞನಾಗಿದ್ದಾನೆ. ಪಂಚಭೂತ-ಗಳಿಂದ ನಿರ್ಮಿತವಾದ ಈ ದೇಹವು ಪಂಚಭೂತಗಳಲ್ಲಿ ಒಂದಾದ ಭೂಮಿಯ ಅಂಶದಿಂದ ಕೂಡಿದೆ. ಎಲ್ಲರ ಮಾತೆ ಎನಿಸಿದ ಭೂಮಾತೆಯನ್ನು ವರ್ಷದಲ್ಲಿ ಐದು ಬಾರಿ ಪೂಜಿಸುವ ಪದ್ಧತಿ ನಮ್ಮ ದೇಶದಲ್ಲಿ ಇದೆ. ಅವುಗಳೆಂದರೆ, 1. ಮಣ್ಣೆತ್ತಿನ ಪೂಜೆ, 2. ನಾಗಪೂಜೆ, 3. ಗೋಕುಲದ ಪೂಜೆ, 4. ಗಣೇಶನ ಪೂಜೆ, 5. ಗೌರೀ ಪೂಜೆ.

ಭೂದೇವಿಯ ಪೂಜೆಯೂ ಮಣ್ಣೆತ್ತಿನ ಪೂಜೆಯಲ್ಲಿ ಅಡಗಿದೆ. ಈ ದಿವಸ ವಿಶೇಷ ಅಡುಗೆಯನ್ನು ಮಾಡಿ ಹರಿವಾಯುಗಳಿಗೆ ನಿವೇದಿಸಿ, ವೃಷಭಗಳಿಗೆ ನೈವೇದ್ಯ ಸಲ್ಲಿಸಿ, ಭೋಜನ ಮಾಡುವುದು ರೂಢಿಯಲ್ಲಿ ಬಂದಿದೆ.

**ಆಚರಿಸುವ ವಿಧಾನ :**

ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ.........

ಮಮ ಸಪರಿವಾರಸ್ಯ ಕ್ಷೇಮ-ಸ್ಥೈರ್ಯ-ವೀರ್ಯ-ವಿಜಯ-ಅಭಯ-ಆಯುಃ-ಆರೋಗ್ಯ-ಐಶ್ವರ್ಯಾದಿ ಅಭಿವೃದ್ಧಿಪೂರ್ವಕಂ ಸಮಸ್ತ ಮಂಗಲಾವಾಪ್ತ್ಯರ್ಥಂ ಜ್ಯೇಷ್ಠ ಅಮಾವಾಸ್ಯಾಯಾಂ ಪ್ರತಿವಾರ್ಷಿಕಂ ಕುಲಾಚಾರತ್ವೇನ ವಿಹಿತಂ ಸಸ್ಯಾಭಿವೃದ್ಧ್ಯರ್ಥಂ ಈತಿಬಾಧಾ ವಿನಾಶ - ಸುವೃಷ್ಟ್ಯಾದಿ ಪ್ರಾಪ್ತ್ಯಾ ಧನಧಾನ್ಯ ಸಮೃದ್ಧ್ಯರ್ಥಂ ಶ್ರೀಉಮಾಪತ್ಯಂತರ್ಗತ

ಭಾರತೀರಮಣಮುಖ್ಯಪ್ರಾಣಾಂತರ್ಗತ ಜಯಾಪತಿ ಸಂಕರ್ಷಣಾಭಿನ್ನ ಶ್ರೀಲಕ್ಷ್ಮೀನರಸಿಂಹ ಪ್ರೇರಣಯಾ ಶ್ರೀಲಕ್ಷ್ಮೀನರಸಿಂಹ ಪ್ರೀತ್ಯರ್ಥಂ ಮೃಣ್ಮಯ ವೃಷಭ ಪೂಜನಂ ಕರಿಷ್ಯೇ ॥ (ಎಂದು ಮಂತ್ರಾಕ್ಷತೆ ನೀರು ಬಿಡಬೇಕು)

ನಂತರ ಕಲಶಪೂಜಾದಿಗಳನ್ನು ಮಾಡಿಕೊಂಡು ಮಣ್ಣೆತ್ತುಗಳಲ್ಲಿ ಜಯಾಪತಿ ಸಂಕರ್ಷಣನ ಸಂಕ್ಷಿಪ್ತವಾಗಿ ಪ್ರಾಣಪ್ರತಿಷ್ಠೆ ಮಾಡಿ ಪುರುಷಸೂಕ್ತದಿಂದ ಷೋಡಶೋಪಚಾರ-ಪೂಜೆಯನ್ನು ಮಾಡಬೇಕು.

**ಧ್ಯಾನಶ್ಲೋಕಃ ।**

ಧರ್ಮಸ್ತ್ವಂ ವೃಷರೂಪೇಣ ಜಗದಾನಂದಕಾರಕ ।
ಅಷ್ಟಮೂರ್ತೇರಧಿಷ್ಠಾನಂ ಅತಃ ಪಾಹಿ ಸನಾತನ ॥

(ವೇದೋಕ್ತ ಪೂಜೆ ಮಾಡುವುದಾದರೆ ಈ ಕೆಳಗಿನ ಮಂತ್ರದಿಂದ ಪೂಜೆ ಮಾಡಬೇಕು)

ಋಷಭಮೇತ್ಯಸ್ಯ ಮಂತ್ರಸ್ಯ ಭೀಮಸೇನ ಋಷಿಃ, ವಿರಾಜಪುತ್ರೋ ಋಷಭ ಋಷಿಃ, ಶಕ್ವರೀ ಛಂದಃ, ವಾಚಸ್ಪತಿರ್ದೇವತಾ, ಋಷಭನಾಮಕ ವಿಷ್ಣ್ವಾವಾಹನೇ ವಿನಿಯೋಗಃ ॥

ಓಂ ॥ ಋಷಭಂ ಮಾ ಸಮಾನಾನಾಂ ಸಪತ್ನಾನಾಂ ವಿಷಾ ಸಹಿಂ ।
ಹಂತಾರಂ ಶತ್ರೂಣಾಂ ಕೃಧಿ ವಿರಾಜಂ ಗೋಪತಿಂ ಗವಾಂ ॥



## ದಿನತ್ರಯ ಸಂಕಲ್ಪಾಃ

**ದಶಮೀ :**

ದಶಮೀ ದಿವಸೇ ಪ್ರಾಪ್ತೇ ವ್ರತಸ್ಥೋಽಹಂ ಜನಾರ್ದನ ।
ತ್ರಿದಿನಂ ದೇವ ದೇವೇಶ ನಿರ್ವಿಘ್ನಂ ಕುರು ಕೇಶವ ॥

**ಏಕಾದಶೀ :**

ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಹಮಪರೇಽಹನಿ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥

**ದ್ವಾದಶೀ :**

ಅಜ್ಞಾನ ತಿಮಿರಾಂಧಸ್ಯ ವ್ರತೇನಾನೇನ ಕೇಶವ ।
ಪ್ರಸನ್ನಃ ಸುಮುಖೋ ಭೂತ್ವಾ ಜ್ಞಾನದೃಷ್ಟಿಪ್ರದೋ ಭವ ॥

ಏಕಾದಶ್ಯುಪವಾಸೇನ ದ್ವಾದಶ್ಯಾಂ ಪಾರಣೇನ ಚ ।
ಯದರ್ಜಿತಂ ಮಯಾ ಪುಣ್ಯಂ ತೇನ ಪ್ರೀಣಾತು ಕೇಶವಃ ॥



# ।। ಚಾತುರ್ಮಾಸ್ಯದಲ್ಲಿ ಆಚರಿಸುವ ವ್ರತಗಳು ।।

**ಪೀಠಿಕೆ :**

ವರ್ಷದಲ್ಲಿ ಆರು ತಿಂಗಳು ಉತ್ತರಾಯಣ, ಇನ್ನಾರು ತಿಂಗಳು ದಕ್ಷಿಣಾಯಣ ಎಂಬ ನಿಯಮವಿದೆ. ಉತ್ತರಾಯಣವು ದೇವತೆಗಳಿಗೆ ಹಗಲು ಇದ್ದಂತೆ. ಈ ಕಾಲದಲ್ಲಿ ಎಲ್ಲಾ ಶುಭಕರ್ಮಗಳನ್ನು ಆಚರಿಸುತ್ತೇವೆ. ದಕ್ಷಿಣಾಯಣವು ದೇವತೆಗಳಿಗೆ ರಾತ್ರಿಯಿದ್ದಂತೆ. ರಾತ್ರಿಕಾಲವು ಹೇಗೆ ಶುಭಕರ್ಮಗಳಿಗೆ ವರ್ಜ್ಯವೋ ಹಾಗೆ ದಕ್ಷಿಣಾಯಣದಲ್ಲಿ ಶುಭಕರ್ಮಗಳನ್ನು ಆಚರಿಸುವುದಕ್ಕೆ ನಿಷೇಧವಿದೆ. ಅಧಿಕಮಾಸದಂತೆ ದಕ್ಷಿಣಾಯಣ ಕಾಲದಲ್ಲೂ ಶುಭಕರ್ಮಗಳನ್ನು ಆಚರಿಸದೇ ಇರುವುದರಿಂದ ಅಧಿಕಮಾಸದ ನಿಯಾಮಕ ದೇವತೆಯಂತೆ ದಕ್ಷಿಣಾಯಣದ ನಿಯಾಮಕ ದೇವತೆಯು ಬ್ರಹ್ಮದೇವರನ್ನು ಮೊರೆ ಹೊಂದಿದಾಗ ಬ್ರಹ್ಮದೇವರು ಕಾಲನಿಯಾಮಕ ದೇವತೆಯನ್ನು ತನ್ನೊಡನೆ ಕರೆದುಕೊಂಡು ಮುಖ್ಯ ಕಾಲನಿಯಾಮಕನಾದ ಶ್ರೀಹರಿಯಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತಾರೆ. ಆಗ ಪರಮಾತ್ಮನು ಉತ್ತರಾಯಣದಲ್ಲಿ ಮಾಡುವ ಶುಭಕರ್ಮ- ಗಳಿಗಿಂತಲೂ ಹೆಚ್ಚಿನ ಪುಣ್ಯ ದಕ್ಷಿಣಾಯಣದ ಸಮಯದಲ್ಲಿ ಮಾಡುವ ವ್ರತ ಪೂಜೆ- ಗಳಿಂದ ಬರಲಿ ಎಂದು ದಕ್ಷಿಣಾಯನ ನಿಯಾಮಕ ದೇವತೆಯನ್ನು ಸಮಾಧಾನ ಪಡಿಸಿ ಕಳುಹಿಸುತ್ತಾನೆ. ಆದಕಾರಣದಿಂದ ದಕ್ಷಿಣಾಯಣದ ಸಮಯದಲ್ಲಿ ಬರುವ ಚಾತುರ್ಮಾಸ್ಯದಲ್ಲಿ ಅನೇಕ ವ್ರತಗಳು ಆಚರಣೆಯಲ್ಲಿ ಬಂದಿವೆ. ಮುಖ್ಯವಾಗಿ ಚಾತುರ್ಮಾಸ್ಯ ವ್ರತ -

1. ಧಾರಣೆ-ಪಾರಣೆ ವ್ರತ
2. ಚಾಂದ್ರಾಯಣ ವ್ರತ
3. ಏಕಭುಕ್ತ (ಏಕೋಡಿ) ವ್ರತ
4. ಮೌನಭೋಜನ (ಮೂಕೂಟ) ವ್ರತ
5. ದಿಕ್ಸಾಧನ ವ್ರತ (ದಿಕ್ಕನ್ನು ಸಾಧಿಸುವುದು)
6. ದಕ್ಷಿಣಹಸ್ತಜಲಪಾನಮ್ (ಬಲಗೈಯಿಂದ ನೀರು ಕುಡಿಯುವುದು)
7. ಅಖಂಡವ್ರತ - ಇತ್ಯಾದಿ

೧. ಧಾರಣೆ-ಪಾರಣೆ ವ್ರತ

ಈ ವ್ರತವನ್ನು ಆಷಾಢಮಾಸ ಅಥವಾ ಕಾರ್ತೀಕಮಾಸದ ಪಾಡ್ಯದಿಂದ ಅಮಾವಾಸ್ಯೆಯವರೆಗೆ ಒಟ್ಟು ಒಂದು ತಿಂಗಳು ಕಾಲ ಆಚರಿಸಬೇಕು. ಮೊದಲನೆಯ ದಿವಸ ಉಪವಾಸ ಮಾಡಿ, ಮಾರನೆಯ ದಿನ ಪಾರಣೆ ಮಾಡಬೇಕು. ಇದನ್ನೇ ಧಾರಣೆ-ಪಾರಣೆ ವ್ರತವೆನ್ನುವರು. ವ್ರತದ ಆರಂಭದ ದಿನದಂದು ಪುಣ್ಯಾಹವಾಚನೆ ಮಾಡಿಸಿಕೊಂಡು ವ್ರತವನ್ನಾರಂಭಿಸಬೇಕು. ಅಂದು ಕೇವಲ ತೀರ್ಥಪ್ರಾಶನ ಮಾಡಬೇಕು. ಮಾರನೆಯ ದಿನ ದಂಪತೀಭೋಜನ ಮಾಡಿಸಿ, ನಂತರ ತಾನು ಪಾರಣೆ ಮಾಡಬೇಕು. ದಂಪತೀಭೋಜನವನ್ನು ಮಾಡಿಸುವುದು ಅಸಾಧ್ಯವಾದರೆ ಒಬ್ಬ ಬ್ರಾಹ್ಮಣನಿಗಾದರೂ ಭೋಜನವನ್ನು ಮಾಡಿಸಿ ನಂತರ ತಾವು ಭೋಜನ ಮಾಡಬೇಕು. ಹೀಗೆ ವ್ರತವನ್ನು ತಿಂಗಳು ಪರ್ಯಂತ ಆಚರಿಸಿ ನಂತರ ಉದ್ಯಾಪನೆ ಮಾಡಿಕೊಳ್ಳಬೇಕು.

೨. ಚಾಂದ್ರಾಯಣ ವ್ರತ

ಈ ವ್ರತವು ಎರಡು ವಿಧವಾಗಿದೆ -

(ಈ ವ್ರತವನ್ನು ಆಷಾಢಮಾಸ ಶುಕ್ಲಪಕ್ಷದ ಪಾಡ್ಯದಿಂದ ಅಮಾವಾಸ್ಯೆಯವರೆಗೆ ಅಥವಾ ಕಾರ್ತೀಕಮಾಸ ಶುಕ್ಲಪಕ್ಷದ ಪಾಡ್ಯದಿಂದ ಅಮಾವಾಸ್ಯೆಯವರೆಗೆ ಆಚರಿಸಬೇಕು)

1. ಆರಂಭದ ದಿವಸದಂದು ಮಾಡಿದ ಅಡುಗೆಯೆಲ್ಲವನ್ನೂ ಸೇರಿಸಿ ಪಾಡ್ಯದಂದು ಒಂದೇ ತುತ್ತು ಮಾತ್ರ ಭೋಜನ ಮಾಡಿ ಒಂದೇ ಲೋಟ ನೀರು ಮಾತ್ರ ಕುಡಿಯಬೇಕು. ನಂತರ ದಿನವಿಡೀ ಯಾವುದೇ ಆಹಾರ-ಪಾನೀಯಗಳನ್ನು ಸೇವಿಸಬಾರದು. ದ್ವಿತೀಯಾ ದಿನದಂದು ಮಾಡಿದ ಅಡುಗೆ ಪದಾರ್ಥಗಳನ್ನೆಲ್ಲಾ ಸೇರಿಸಿ ಕೇವಲ ಎರಡೇ ತುತ್ತು ಮಾತ್ರ ಭೋಜನ ಮಾಡಬೇಕು. ಎರಡೇ ಲೋಟ ನೀರು ಮಾತ್ರ ಕುಡಿಯಬೇಕು. ಮೂರನೆಯ ದಿನ ಮೂರು ತುತ್ತು ಅನ್ನ, ಮೂರು ಲೋಟ ನೀರು ಕುಡಿಯಬೇಕು. ಹೀಗೆ ಏಕಾದಶಿಯವರೆಗೆ ಮಾಡಿ ಏಕಾದಶಿಯಂದು ಶುದ್ಧೋಪವಾಸವನ್ನು ಮಾಡಿ, ದ್ವಾದಶಿಯ ದಿವಸ ಮಾಡಿದ ಅಡುಗೆ ಪದಾರ್ಥಗಳನ್ನೆಲ್ಲಾ ಸೇರಿಸಿ ಕೇವಲ ಹನ್ನೆರಡು ತುತ್ತು ಆಹಾರ ಮತ್ತು ಹನ್ನೆರಡು ಲೋಟದಷ್ಟು ನೀರನ್ನು ಮಾತ್ರ ಭೋಜನ ಸಮಯದಲ್ಲಿ ಸ್ವೀಕರಿಸಬೇಕು. ಬೇರೆ ಸಮಯದಲ್ಲಿ ಯಾವುದೇ ರೀತಿಯ ಆಹಾರ-ಪಾನೀಯಗಳನ್ನು ಸೇವಿಸಬಾರದು. ಕೊನೆಗೆ ಹುಣ್ಣಿಮೆಯಂದು ಮಾಡಿದ ಆಹಾರ ಪದಾರ್ಥಗಳನ್ನೆಲ್ಲಾ ಸೇರಿಸಿ ಕೇವಲ ಹದಿನೈದು ತುತ್ತು ಆಹಾರ ಮತ್ತು ಹದಿನೈದು ಲೋಟ ನೀರನ್ನು ಸ್ವೀಕರಿಸಬೇಕು. ಕೃಷ್ಣಪಕ್ಷದ ಪಾಡ್ಯದಿಂದ ಒಂದೊಂದು ತುತ್ತು ಆಹಾರ ಮತ್ತು ನೀರನ್ನು ಕಡಿಮೆ ಮಾಡುತ್ತಾ ವ್ರತವನ್ನು ಆಚರಿಸಬೇಕು. ಏಕಾದಶಿಯಂದು ಸಂಪೂರ್ಣ ಉಪವಾಸ ಮಾಡಿ, ದ್ವಾದಶಿ ಪಾರಣೆ ದಿನದಂದು ಪೂರ್ವಕ್ರಮದಂತೆ ಆಹಾರ ನೀರನ್ನು ಕಡಿಮೆ ಮಾಡುತ್ತಾ ಅಮಾವಾಸ್ಯೆ ದಿನ ಪೂರ್ಣ ಉಪವಾಸ ಮಾಡಬೇಕು.

ಹೀಗೆ ಈ ವ್ರತವನ್ನು ಒಂದು ತಿಂಗಳು ಪೂರ್ತಿ ಆಚರಿಸಬೇಕು. ಮಾರನೆಯ ದಿನ ಪ್ರತಿಪತ್ತಿನಂದು ತನ್ನ ಯೋಗ್ಯತಾನುಸಾರ ಬ್ರಾಹ್ಮಣ-ಸುವಾಸಿನಿಯರಿಗೆ ಮೃಷ್ಟಾನ್ನ ಭೋಜನ ಮಾಡಿಸಿ, ತಾನು ತೀರ್ಥದೊಂದಿಗೆ ಹರಿನ್ನೈವೇದ್ಯವನ್ನು ಸ್ವೀಕರಿಸಬೇಕು. ಈ ವ್ರತಕ್ಕೆ ಉದ್ಯಾಪನೆ ಮಾಡುವ ಸಂಪ್ರದಾಯವಿಲ್ಲ.

2. ಪಾಡ್ಯದಿಂದ ಅಮಾವಾಸ್ಯೆಯವರೆಗಿನ 30 ದಿನಗಳು ಮಾಡಿದ ಅಡುಗೆ ಪದಾರ್ಥಗಳಲ್ಲಿ ಹರಿನಿವೇದನವಾದ ನಂತರ ಎಂಟು ತುತ್ತು ಆಹಾರ ಎಂಟು ಲೋಟದಷ್ಟು ನೀರನ್ನು ಮಾತ್ರ ಸ್ವೀಕರಿಸಬಹುದು. ಏಕಾದಶೀ ಹಾಗೂ ಅಮಾವಾಸ್ಯೆ ದಿನದಂದು ಪೂರ್ಣ ಉಪವಾಸ ಮಾಡಿ ಮಾರನೆಯ ದಿನ ಅಂದರೆ ಪಾಡ್ಯದಂದು ಬ್ರಾಹ್ಮಣ-ಸುವಾಸಿನಿಯರಿಗೆ ಮೃಷ್ಟಾನ್ನ ಭೋಜನ ಮಾಡಿಸಿ ತಾನು ತೀರ್ಥ-ಪ್ರಸಾದ ಸ್ವೀಕರಿಸಬೇಕು.

**೩. ಏಕಭುಕ್ತ (ಏಕೋಡಿ) ವ್ರತ**

ಈ ವ್ರತವನ್ನು ಆಷಾಢ ಶುದ್ಧ ದ್ವಾದಶಿಯಿಂದ ಕಾರ್ತೀಕ ಶುದ್ಧ ದ್ವಾದಶೀ ಅಂದರೆ ತುಳಸೀವಿವಾಹದ ದಿನದವರೆಗೂ ಆಚರಿಸಬೇಕು.

**ವ್ರತವನ್ನು ಆಚರಿಸುವಾಗ ಪಾಲಿಸಬೇಕಾದ ನಿಯಮಗಳು** : ಊಟಕ್ಕೆ ಕೂಡುವಾಗ ಮಾಡಿದ ಆಹಾರ ಪದಾರ್ಥಗಳೆಲ್ಲವನ್ನೂ ಭೋಜನ ಪಾತ್ರೆಯಲ್ಲಿ ಬಡಿಸಿಕೊಂಡು ಕೂಡಬೇಕು. ನಂತರ ಊಟ ಮುಗಿಯುವವರೆಗೂ ಯಾವುದೇ ರೀತಿಯ ಪದಾರ್ಥವನ್ನು ಹಾಕಿ / ಹಾಕಿಸಿಕೊಳ್ಳಬಾರದು. ರಾತ್ರಿ ಊಟ ಮಾಡುವಾಗಲೂ ಇದೇ ನಿಯಮವನ್ನು ಪಾಲಿಸಬೇಕು. ಆದರೆ ಜಲಪಾನಕ್ಕೆ ಈ ನಿಯಮವು ಅನ್ವಯ- ವಾಗುವುದಿಲ್ಲ.

**೪. ಮೌನಭೋಜನ (ಮೂಕೂಟ) ವ್ರತ**

ಸ್ನಾಸ್ಯತೋ ವರುಣಃ ಕಾಂತಿಂ ಜುಹ್ವತೋಽಗ್ನಿಃ ಶ್ರಿಯಂ ಹರೇತ್ ।
ಭುಂಜತೋ ಮೃತ್ಯುರಾಯುಷ್ಯಂ ತಸ್ಮಾನ್ಮೌನಂ ತ್ರಿಷು ಸ್ಮೃತಮ್ ॥

**ಅರ್ಥ** :– ಸ್ನಾನ ಮಾಡುವಾಗ ಮತ್ತು ಹೋಮ ಮಾಡುವಾಗ ಹಾಗೂ ಭೋಜನ ಮಾಡುವಾಗ ಮಾತನಾಡದೇ ಹರಿಸ್ಮರಣೆಯನ್ನು ಮಾಡುತ್ತಾ ಈ ಕೆಲಸಗಳನ್ನು ಪೂರೈಸಬೇಕು. ಸ್ನಾನ ಮಾಡುವಾಗ ಮಾತನಾಡಿದರೆ, ಜಲಾಭಿಮಾನಿ ವರುಣನು ದೇಹದ ಕಾಂತಿಯನ್ನು ಕಳೆಯುವನು. ಹೋಮ-ಹವನಗಳನ್ನು ಮಾಡುವಾಗ ಮಾತನಾಡಿದರೆ, ಅಗ್ನಿದೇವನು ನಮ್ಮ ಎಲ್ಲ ತರಹದ ಐಹಿಕ ಸಂಪತ್ತನ್ನು ನಾಶ ಮಾಡುವನು. ಭೋಜನ ಮಾಡುವಾಗ ಮಾತನಾಡಿದರೆ, ಪರಮಾತ್ಮನು ಆಯುಷ್ಯವನ್ನು ಕಳೆಯುವನು ಎಂದು ಜ್ಞಾನಿಗಳ ನುಡಿಗನುಸಾರವಾಗಿ ಈ ವ್ರತ ಆಚರಣೆಗೆ ಬಂದಿರಬಹುದು.

**ವ್ರತವನ್ನು ಆಚರಿಸುವಾಗ ಪಾಲಿಸಬೇಕಾದ ನಿಯಮ** : ಊಟಕ್ಕೆ ಕುಳಿತಾಗ ಯಾವುದೇ ಕಾರಣದಿಂದಲೂ ಲೌಕಿಕ ಹರಟೆಯನ್ನು ಕೊಚ್ಚದೆ ಕೇವಲ ಶ್ರೀಹರಿಸ್ಮರಣೆ- ಯನ್ನು, ಗೋವಿಂದನಾಮವನ್ನು ಹೇಳುತ್ತಾ ಭೋಜನ ಮಾಡಬೇಕು.

### ೫. ದಿಕ್ಸಾಧನ ವ್ರತ (ದಿಕ್ಕನ್ನು ಸಾಧಿಸುವುದು)

ಚಾತುರ್ಮಾಸ್ಯ ಪ್ರಾರಂಭದಿಂದಲೇ ಈ ವ್ರತವನ್ನು ಆರಂಭಿಸುವುದು. ಆಷಾಢ ಶುದ್ಧ ದ್ವಾದಶೀಯಿಂದ ಶ್ರಾವಣ ಶುದ್ಧ ದಶಮೀಯವರೆಗೆ ಒಂದು ತಿಂಗಳು ಪೂರ್ತಿ ಪೂರ್ವದಿಕ್ಕಿಗೆ ಮುಖ ಮಾಡಿ ಭೋಜನ ಮಾಡಬೇಕು. ಶ್ರಾವಣ ಶುದ್ಧ ದ್ವಾದಶೀಯಿಂದ ಭಾದ್ರಪದ ಶುದ್ಧ ದಶಮೀಯವರೆಗೆ ದಕ್ಷಿಣ ದಿಕ್ಕಿಗೆ ಮುಖ ಮಾಡಿ ಊಟ ಮಾಡುವುದು. ಭಾದ್ರಪದ ಶುದ್ಧ ದ್ವಾದಶೀಯಿಂದ ಆಶ್ವಯುಜ ಶುದ್ಧ ದಶಮೀಯವರೆಗೆ ಪಶ್ಚಿಮ ದಿಕ್ಕಿಗೆ ಮುಖ ಮಾಡಿ ಊಟ ಮಾಡಬೇಕು. ಆಶ್ವಯುಜ ಶುದ್ಧ ದ್ವಾದಶೀಯಿಂದ ಕಾರ್ತೀಕ ಶುದ್ಧ ದಶಮೀಯವರೆಗೂ ಉತ್ತರ ದಿಕ್ಕಿಗೆ ಮುಖ ಮಾಡಬೇಕು. ಕಾರ್ತೀಕ ಶುದ್ಧ ದ್ವಾದಶೀಯಂದು (ಉತ್ಥಾನ ದ್ವಾದಶೀ) ಬ್ರಾಹ್ಮಣ-ಸುವಾಸಿನೀ ಭೋಜನ ಮಾಡಿಸಿ, ತೀರ್ಥಪ್ರಸಾದ ಸ್ವೀಕರಿಸಿ ಈ ವ್ರತವನ್ನು ಮುಗಿಸಬೇಕು.

### ೬. ದಕ್ಷಿಣಹಸ್ತಜಲಪಾನಮ್ (ಬಲಗೈಯಿಂದ ನೀರು ಕುಡಿಯುವುದು)

ಎಡಗೈಯಿಂದ ನೀರನ್ನು ಕುಡಿದರೆ ಸುರಾಪಾನಕ್ಕೆ ಸಮವೆಂದು ಶಾಸ್ತ್ರವಾಣಿ. ಎಲ್ಲಾ ಕಾಲದಲ್ಲೂ ಬಲಗೈಯಿಂದಲೇ ನೀರನ್ನು ಕುಡಿಯಬೇಕು. ಆದರೆ, ಸರ್ವೇಸಾಮಾನ್ಯವಾಗಿ ಎಡಗೈಯಿಂದ ನೀರು ಕುಡಿಯುವುದು ಹೆಚ್ಚು ಪ್ರಚಾರದಲ್ಲಿದೆ. ಕನಿಷ್ಠಪಕ್ಷ ಚಾತುರ್ಮಾಸ್ಯದ ನಾಲ್ಕು ತಿಂಗಳುಗಳಾದರೂ ಬಲಗೈಯಿಂದಲೇ ನೀರನ್ನು ಕುಡಿಯಬೇಕು. ಇದು ಒಂದು ವ್ರತ. ಈ ವ್ರತವನ್ನು ಮುಗಿಸಿ, ವ್ರತದ ಸಂಪೂರ್ಣ ಫಲಪ್ರಾಪ್ತಿಗಾಗಿ ಯೋಗ್ಯ ಬ್ರಾಹ್ಮಣರಿಗೆ ರಜತ ಪಾತ್ರೆಯನ್ನು (ಲೋಟ) ದಾನ ಮಾಡಬೇಕು.

### ೭. ಅಖಂಡವ್ರತ

ಪ್ರತಿದಿನ ಮಧ್ಯಾಹ್ನ ಮಾತ್ರ ಭೋಜನ ಮಾಡಿ ಸಾಕಾಗುವಷ್ಟು ನೀರನ್ನು ಕುಡಿಯಬಹುದು. ನಂತರ ಮರುದಿನದ ಭೋಜನದವರೆಗೂ ಯಾವುದೇ ರೀತಿಯ ಆಹಾರ ಮತ್ತು ಪಾನೀಯಗಳನ್ನು ಸ್ವೀಕರಿಸಬಾರದು. ಈ ರೀತಿ ಚಾತುರ್ಮಾಸ್ಯದ ಆರಂಭದಿಂದ ಕೊನೆಯವರೆಗೂ ಆಚರಿಸಬೇಕು. ಹೀಗೆ ಆಚರಿಸಲು ಅಸಾಧ್ಯವೆನಿಸಿದರೆ ಚಾತುರ್ಮಾಸ್ಯದ ನಾಲ್ಕು ತಿಂಗಳಲ್ಲೂ ಬರುವ ದಿನತ್ರಯಗಳಲ್ಲಾದರೂ (ದಶಮೀ - ದ್ವಾದಶೀ ದಿನಗಳಂದು) ಈ ವ್ರತವನ್ನು ಮಾಡಬೇಕು. ಈ ಸಮಯದಲ್ಲಿ ಯೋಗ್ಯ ಬ್ರಾಹ್ಮಣರನ್ನು ಕರೆದು ಉಪಾಹಾರವನ್ನು ಮಾಡಿಸಿ, ಅವರನ್ನು ತೃಪ್ತಿಗೊಳಿಸಬೇಕು.

### ಬುಧಬೃಹಸ್ಪತಿಪೂಜೆ

ಶ್ರಾವಣಮಾಸದಲ್ಲಿ ಬರುವ ಬುಧವಾರ ಮತ್ತು ಗುರುವಾರಗಳಂದು ಬುಧಗ್ರಹ ಮತ್ತು ಬೃಹಸ್ಪತಿಗ್ರಹಗಳ 'ಚಿತ್ರಗಳನ್ನು ಸೀಮೆಸುಣ್ಣದಿಂದಾಗಲೀ, ಕೆಮ್ಮಣ್ಣಿನಿಂದಾಗಲೀ ಗೋಡೆಯ ಮೇಲೆ ಬರೆದು ಅವುಗಳಿಗೆ ಅರಿಷಿಣ-ಕುಂಕುಮ-ಗೆಜ್ಜೆವಸ್ತ್ರಗಳನ್ನರ್ಪಿಸಿ ಪೂಜಿಸಬೇಕು. ಇವರ ಬಗ್ಗೆ ಒಂದು ಇತಿಹಾಸವಿದೆ. ಶ್ರಾವಣಮಾಸದಲ್ಲಿ ಬುಧ ಮತ್ತು

ಬೃಹಸ್ಪತಿಗ್ರಹಗಳು ಭಕ್ತನೊಬ್ಬನ ಮನೆಗೆ ತಮಗೆ ಹಸಿವೆಯಾಗಿದೆ, ಏನಾದರೂ ಆಹಾರವನ್ನು ಕೊಡಿ ಎಂದು ಬೇಡಲು ಬಂದರು. ಆಗ ಭಕ್ತನು ಬಡವನಾಗಿದ್ದರೂ ಅತಿಥಿ ಸತ್ಕಾರವು ಧರ್ಮವೆಂದು ತಿಳಿದು ಮನೆಯಲ್ಲಿ ಮಾಡಿದ ಪದಾರ್ಥವನ್ನೆಲ್ಲಾ ಅತಿಥಿಗಳಿಗೆ ಉಣಬಡಿಸಿ ಅವರನ್ನು ತೃಪ್ತಿಪಡಿಸಿದನು. ತೃಪ್ತರಾದ ಬುಧ-ಬೃಹಸ್ಪತಿಗಳು ಆ ಭಕ್ತನಿಗೆ ಸಕಲ ಸಂಪತ್ತು ದೊರಕುವಂತೆ ಹರಸಿ ಅದೃಶ್ಯರಾದರು. ಅತಿಥಿ ಸತ್ಕಾರವನ್ನು ನಡೆಸಿದ ಆ ಭಕ್ತನು ಬುಧ-ಬೃಹಸ್ಪತಿಗ್ರಹಗಳ ಕರುಣೆಯಿಂದ ಐಶ್ವರ್ಯವಂತನಾಗಿ ಜೀವನದಲ್ಲಿ ಧನ್ಯತೆಯನ್ನು ಪಡೆದನು.

**ಸಂಪತ್ತು ಶುಕ್ರವಾರದ ಪೂಜೆ**

ಶ್ರಾವಣಮಾಸದಲ್ಲಿ ಬರುವ ಶುಕ್ರವಾರದಂದು ಶುಕ್ರವಾರ ಗೌರಿಯ ಪೂಜೆಯನ್ನು ಮಾಡಬೇಕು. ಶ್ರಾವಣಮಾಸದಲ್ಲಿ ಅಪರೂಪಕ್ಕೆ ಐದು ಶುಕ್ರವಾರಗಳು ಬರುವುದಿದೆ. ಆಗ ಐದೂ ಶುಕ್ರವಾರವೂ ಪೂಜೆ ಮಾಡಬೇಕು. ಮಣ್ಣಿನ ಚಟಿಗೆ (ಮಣ್ಣಿನ ತಂಬಿಗೆ)ಯ ಹೊರಭಾಗದಲ್ಲಿ ಸರಿಯಾಗಿ ಐದು ಭಾಗ ಮಾಡಿ ಮುಂಭಾಗದಲ್ಲಿ ಬಿಳಿಯ ಸುಣ್ಣದಿಂದ ಗೌರೀಮುಖವನ್ನು ಬರೆಯಬೇಕು. ಉಳಿದ ನಾಲ್ಕು ಭಾಗಗಳಲ್ಲಿ ಕ್ರಮವಾಗಿ ಆನೆ, ಆಕಳು, ಚಕ್ರ-ಶಂಖ, ಗದಾ-ಪದ್ಮ ಚಿತ್ರಗಳನ್ನು ಬರೆಯಬೇಕು. ಈ ತಂಬಿಗೆ ಅಥವಾ ಚಟಿಗೆಯೊಳಗೆ ಚಿಕ್ಕ ಪ್ರಮಾಣದ ಪಂಚಪಾತ್ರೆಯಲ್ಲಿ ಅಕ್ಕಿಯನ್ನು ತುಂಬಿಸಿ, ಐದು ಸಲ ಹಾಕಬೇಕು. ಅರಿಷಿಣ-ಕುಂಕುಮ-ಕರಿಮಣಿ-ಅಡಿಕೆ ಬೆಟ್ಟು-ಅರಿಷಿಣ ಬೇರು- ಬೆಳ್ಳಿಯ ಕಾಲುಂಗುರ-ಪಿಲ್ಲೆ-ಮುಂತಾದವುಗಳನ್ನು ಹಾಕಿ ಮೇಲೆ ಮುಚ್ಚಳ ಮುಚ್ಚಬೇಕು. (ಚಟಿಗೆಗೆ ಮಣ್ಣಿನ ಮುಚ್ಚಳ ಅಥವಾ ತಾಮ್ರದ ತಂಬಿಗೆಗೆ ತಾಮ್ರದ ಮುಚ್ಚಳವನ್ನು ಮುಚ್ಚಬೇಕು) ಈ ಮುಚ್ಚಳದ ಮೇಲೂ ಅಷ್ಟದಲಪದ್ಮ ಆಗಲೀ, ಅಥವಾ ಗೌರಿಯ ಮುಖವನ್ನಾಗಲೀ ಬರೆಯಬೇಕು. ಹೀಗೆ ಸಿದ್ಧಪಡಿಸಿದ ತಂಬಿಗೆಯು ಗೌರಿಯ ಪ್ರತಿಮೆಯೆಂದು ತಿಳಿದು, ಆ ತಂಬಿಗೆ / ಚಟಿಗೆಗೆ ಮಂಗಳಸೂತ್ರ ಕಟ್ಟಿ ಶುಭ್ರವಾದ ಮಂಟಪದಲ್ಲಿ ಅಕ್ಕಿಯನ್ನು ಹರಡಿ ಅದರ ಮೇಲೆ ಕುಂಕುಮದಿಂದ ಪದ್ಮವನ್ನು ಬರೆದು, ವ್ರತದ ಸಂಕಲ್ಪ ಮಾಡಿ ತಂಬಿಗೆ / ಚಟಿಗೆಯನ್ನು ಆ ಮಂಟಪದಲ್ಲಿ ಸ್ಥಾಪಿಸಬೇಕು. ನಂತರ ನಿರ್ವಿಘ್ನವಾಗಿ ಒಂದು ತಿಂಗಳು ಪೂರ್ತಿ ಈ ಗೌರಿಯನ್ನು ಕೂಡಿಸಬೇಕಾಗಿರುವುದರಿಂದ ಗಣಪತಿಪೂಜೆಯನ್ನು ಮಾಡಿ, ಪೀಠಪೂಜೆ, ಪ್ರಾಣಪ್ರತಿಷ್ಠೆಗಳನ್ನು ಮಾಡಿ ಪುರುಷಸೂಕ್ತ- ಶ್ರೀಸೂಕ್ತಗಳಿಂದ ಶ್ರೀಲಕ್ಷ್ಮೀನಾರಾಯಣರಿಗೆ ಷೋಡಶೋಪಚಾರ ಪೂಜೆಯನ್ನು ಮಾಡಬೇಕು. ಈ ಗೌರಿಯನ್ನು ಸಾಕ್ಷಾತ್ ಮಹಾಲಕ್ಷ್ಮೀ ಎಂದೇ ತಿಳಿದು ಪೂಜಿಸಬೇಕು.

# ॥ ಶ್ರೀಮಂಗಲಗೌರೀವ್ರತಮ್ ॥

## (ಶ್ರಾವಣಮಾಸದಲ್ಲಿ ಮಂಗಳವಾರಗಳು)

ಸ್ತ್ರೀಯು ಪತಿಯ ಆಯುಷ್ಯಾಭಿವೃದ್ಧಿಯಾಗುವುದಕ್ಕೋಸ್ಕರ ಮದುವೆಯಾದ ಮೇಲೆ ಮೊದಲಿನ ಐದು ವರ್ಷಗಳು ಶ್ರಾವಣಮಾಸದಲ್ಲಿ ಪ್ರತಿ ಮಂಗಳವಾರ ಮಂಗಳಗೌರೀ ಪೂಜೆಯನ್ನು ವೈಭವಾನುಸಾರವಾಗಿ (ಮೊದಲನೆಯ ವರ್ಷ ತಾಯಿಯ ಮನೆಯಲ್ಲಿ) ಮಾಡಬೇಕು.

**ಪೂಜಾಸಾಮಗ್ರಿಗಳು :**

ಅರಿಶಿನ, ಕುಂಕುಮ, ರಂಗವಲ್ಲೀ, ಹೂ, ಗರಿಕೆ, ಪತ್ರಿ, ಊದಿನಕಡ್ಡಿ, ಕರ್ಪೂರ, ಹೂಬತ್ತಿ, ಮಂಗಳಾರತಿ ಬತ್ತಿ, ಗೆಜ್ಜೆವಸ್ತ್ರ, ಅಡಿಕೆಬೆಟ್ಟ, ವೀಳ್ಯದೆಲೆ, ಒಣಕೊಬ್ಬರಿ, ತೆಂಗಿನಕಾಯಿ, ಉತ್ತತ್ತಿ, ಹಣ್ಣುಗಳು, ಗಂಧ, ಪಂಚಾಮೃತ (ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಬಾಳೆಹಣ್ಣು) ಅನೇಕ ತರಹದ ಪತ್ರ-ಪುಷ್ಪಗಳು ಇತ್ಯಾದಿಗಳು.

**ದೇವತಾಸ್ಮರಣಮ್ ।**

ಶ್ರೀಗುರುಭ್ಯೋ ನಮಃ, ಹರಿ ಓಂ ।

1. ಓಂ ಶುಕ್ಲಾಂಬರಧರಂ ವಿಷ್ಣುಂ, ಶಶಿವರ್ಣಂ ಚತುರ್ಭುಜಂ ।
   ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

2. ಓಂ ಕಲ್ಯಾಣಾದ್ಭುತಗಾತ್ರಾಯ, ಕಾಮಿತಾರ್ಥಪ್ರದಾಯಿನೇ ।
   ಶ್ರೀಮದ್ವೇಂಕಟನಾಥಾಯ, ಶ್ರೀನಿವಾಸಾಯ ತೇ ನಮಃ ॥

**ದೀಪಪ್ರಜ್ವಲನಮ್ ।**

ಓಂ ॥ ಅಗ್ನಿನಾಗ್ನಿಸ್ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ ಜುಹ್ವಾಸ್ಯಃ ॥
(ಹೀಗೆ ಹೇಳುತ್ತಾ ದೀಪಗಳನ್ನು ಹಚ್ಚಬೇಕು)

**ಭೂತೋಚ್ಚಾಟನಮ್ ।**

'ಅಪಸರ್ಪಂತು ಯೇ ಭೂತಾಃ ಯೇ ಭೂತಾ ಭುವಿ ಸಂಸ್ಥಿತಾಃ ।
ಯೇ ಭೂತಾ ವಿಘ್ನಕರ್ತಾರಸ್ತೇ ನಶ್ಯಂತು ಶಿವಾಜ್ಞಯಾ ॥

ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ಯೇ ಚಾತ್ರ ನಿವಸಂತ್ಯೇವ ದೇವತಾಭುವಿ ಸಂತತಮ್ ।
ತೇಷಾಮಪ್ಯವಿರೋಧೇನ ಬ್ರಹ್ಮಕರ್ಮ ಸಮಾರಭೇ ॥'
ಇತಿ ಘೋಟಿಕಾಮುದ್ರಯಾ ಸಮಸ್ತ ಭೂತಾನ್ಯುಚ್ಚಾಟ್ಯ,
ನಾರಾಚಮುದ್ರಯಾ ದಿಶೋ ಬಧ್ನೀಯಾತ್ ॥

॥ ಶ್ರೀಗಣೇಶಾಯ ನಮಃ ॥

## ॥ ಶ್ರೀಮಂಗಳಗೌರೀ ಪೂಜಾ ॥

*ಆಚಮ್ಯ ॥ ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । ಗೋವಿಂದಾಯ ನಮಃ । ವಿಷ್ಣವೇ ನಮಃ । ಮಧುಸೂದನಾಯ ನಮಃ । ತ್ರಿವಿಕ್ರಮಾಯ ನಮಃ । ವಾಮನಾಯ ನಮಃ । ಶ್ರೀಧರಾಯ ನಮಃ । ಹೃಷೀಕೇಶಾಯ ನಮಃ । ಪದ್ಮನಾಭಾಯ ನಮಃ । ದಾಮೋದರಾಯ ನಮಃ । ಸಂಕರ್ಷಣಾಯ ನಮಃ । ವಾಸುದೇವಾಯ ನಮಃ । ಪ್ರದ್ಯುಮ್ನಾಯ ನಮಃ । ಅನಿರುದ್ಧಾಯ ನಮಃ । ಪುರುಷೋತ್ತಮಾಯ ನಮಃ । ಅಧೋಕ್ಷಜಾಯ ನಮಃ । ನಾರಸಿಂಹಾಯ ನಮಃ । ಅಚ್ಯುತಾಯ ನಮಃ । ಜನಾರ್ದನಾಯ ನಮಃ । ಉಪೇಂದ್ರಾಯ ನಮಃ । ಹರಯೇ ನಮಃ । ಶ್ರೀಕೃಷ್ಣಾಯ ನಮಃ ॥

ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಅದ್ಯಬ್ರಹ್ಮಣಃ....... ಶ್ರಾವಣಮಾಸೇ......... ವಾಸರೇ ಮಮ ಪುತ್ರಪೌತ್ರಾದಿವೃದ್ಧ್ಯೇ ಅವ್ಯೆಥವ್ಯಾಯುರಾರೋಗ್ಯಾದಿ ಸಕಲಮನೋಭೀಷ್ಟಸಿದ್ಧಿದ್ವಾರಾ ಶ್ರೀಮದ್ರಾಘವೇಂದ್ರತೀರ್ಥ ಗುರ್ವಂತರ್ಗತ ಶ್ರೀಮಂಗಳಗೌರೀ-ಶಿವಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಜಯಾಪತಿಸಂಕರ್ಷಣಪ್ರೇರಣಯಾ ಶ್ರೀಜಯಾಪತಿಸಂಕರ್ಷಣಪ್ರೀತ್ಯರ್ಥಂ ಮಂಗಳಗೌರ್ಯಾಃ ಯಥಾಮಿಲಿತೋಪಚಾರದ್ರವ್ಯೈಃ ಧ್ಯಾನಾವಾಹನಾದಿ ಷೋಡಶೋಪಚಾರ-ಪೂಜಾಂ ಕರಿಷ್ಯೇ ॥ ತದಂಗತಯಾ ಶ್ರೀಮಹಾಗಣಪತಿಪೂಜಾಂ ಕರಿಷ್ಯೇ ॥ (ಮಂತ್ರಾಕ್ಷತೆ-ನೀರನ್ನು ಬಿಡಬೇಕು)

ಓಂ ಶ್ರೀಮನ್ಮಹಾಗಣಪತಯೇ ನಮಃ, ಧ್ಯಾಯಾಮಿ ॥ ಅಸ್ಮಿನ್ ಪೂಗೀಫಲೇ ಮಹಾಗಣಪತಿಂ ಆವಾಹಯಾಮಿ । ಆಸನಂ, ಪಾದ್ಯಂ, ಅರ್ಘ್ಯಂ, ಆಚಮನೀಯಂ, ಮಧುಪರ್ಕಂ, ಪುನರಾಚಮನಂ, ಸ್ನಾನಂ, ವಸ್ತ್ರಯುಗ್ಮಂ, ಯಜ್ಞೋಪವೀತಂ, ಆಭರಣಂ, ಚಂದನಂ, ಅಕ್ಷತಾನ್, ಧೂಪಂ, ದೀಪಂ, ನೈವೇದ್ಯಂ, ತಾಂಬೂಲಂ, ಸುವರ್ಣ-ಪುಷ್ಪದಕ್ಷಿಣಾಂ, ಮಂಗಲನೀರಾಜನಂ, ಮಂತ್ರಪುಷ್ಪಾಂಜಲಿಂ ಚ ಸಮರ್ಪಯಾಮಿ ॥

---

* ಮೇಲೆ ಕೊಟ್ಟ 24 ನಾಮಗಳಲ್ಲಿ ಮೊದಲಿನ ಮೂರು ನಾಮಗಳಿಂದ ನೀರು ಪ್ರಾಶನಮಾಡಿ, ನಾಲ್ಕನೆಯ ನಾಮವನ್ನು ಉಚ್ಚರಿಸಿ ನೀರನ್ನು ಕೆಳಗೆ ಬಿಡಬೇಕು.

**ಪ್ರಾರ್ಥನಾ ।**

ವಕ್ರತುಂಡ ಮಹಾಕಾಯ ಸೂರ್ಯಕೋಟಿಸಮಪ್ರಭ ।
ನಿರ್ವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥
ಶ್ರೀಮನ್ಮಹಾಗಣಪತಯೇ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥

ಅನೇನ ಷೋಡಶೋಪಚಾರಪೂಜನೇನ ಶ್ರೀಮದ್ರಾಘವೇಂದ್ರತೀರ್ಥ-ಗುರ್ವಂತರ್ಗತ ಸಕಲವಿಘ್ನಹರ್ತೃ ಮಹಾಗಣಪತ್ಯಂತರ್ಗತಭಾರತೀರಮಣಮುಖ್ಯ-ಪ್ರಾಣಾಂತರ್ಗತವಿಶ್ವಂಭರಮೂರ್ತಿಃ ಪ್ರೀಯತಾಂ ॥

॥ ಶ್ರೀಕೃಷ್ಣಾರ್ಪಣಮಸ್ತು ॥

**ಘಂಟಾವಾದನಮ್ ।**

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ ।
ಕುರು ಘಂಟಾರವಂ ತತ್ರ ದೇವತಾಹ್ವಾನಲಾಂಛನಂ ॥
ಘಂಟಾದೇವತಾಭ್ಯೋ ನಮಃ । ಸರ್ವೋಪಚಾರಾರ್ಥೇ ಗಂಧಾಕ್ಷತಪುಷ್ಪಾಣಿ ಸಮರ್ಪಯಾಮಿ । ಘಂಟಾನಾದಂ ಕುರ್ಯಾತ್ ॥

**ಕಲಶಪೂಜಾ ।**

ಕಲಶಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಗಂಧಾಕ್ಷತೆ ಹಚ್ಚಿ ಅದರೊಳಗೆ ತುಳಸೀದಳ - ಬಿಡಿಹೂಗಳನ್ನು ಹಾಕಿಕೊಂಡು ಕಲಶದ ಮೇಲೆ ಬಲಗೈಯನ್ನಿಟ್ಟು ಕಲಶಪೂಜೆ ಮಾಡಬೇಕು. ಈ ಕಲಶದ ನೀರನ್ನೇ ಪೂಜೆಗೆ ಉಪಯೋಗಿಸಬೇಕು. ಪಂಚಪಾತ್ರೆಯ ನೀರನ್ನು ಆಚಮನಕ್ಕೆ ಮಾತ್ರ ಉಪಯೋಗಿಸಬೇಕು.

ಓಂ ॥ ಆಕಲಶೇಷು ಧಾವತಿ ಪವಿತ್ರೇ ಪರಿಷಿಚ್ಯತೇ ।
ಉಕ್ಥೈರ್ಯಜ್ಞೇಷು ವರ್ಧತೇ ॥
ಕಲಶಂ ಗಂಧಾಕ್ಷತಾಪತ್ರಪುಷ್ಪೈರಭ್ಯರ್ಚ್ಯ ॥

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಸ್ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥
ಕುಕ್ಷೌ ತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಸ್ಸಾಮವೇದೋ ಹ್ಯಥರ್ವಣಃ ॥
ಅಂಗೈಶ್ಚ ಸಹಿತಾಸ್ಸರ್ವೇ ಕಲಶಂ ತು ಸಮಾಶ್ರಿತಾಃ ।
ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ ॥
ಆಯಾಂತು ದೇವಪೂಜಾರ್ಥಮಭಿಷೇಕಾರ್ಥಸಿದ್ಧಯೇ ॥

ಓಂ ॥ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣಿಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

ನಿರ್ವಿಷೀಕರಣಾರ್ಥಂ ತಾರ್ಕ್ಷ್ಯಮುದ್ರಾಂ ಪ್ರದರ್ಶಯಾಮಿ । ಅಮೃತೀಕರಣಾರ್ಥಂ ಧೇನುಮುದ್ರಾಂ ಪ್ರದರ್ಶಯಾಮಿ । ಪವಿತ್ರೀಕರಣಾರ್ಥಂ ಶಂಖಮುದ್ರಾಂ ಪ್ರದರ್ಶಯಾಮಿ । ಸಂರಕ್ಷಣಾರ್ಥಂ ಚಕ್ರಮುದ್ರಾಂ ಪ್ರದರ್ಶಯಾಮಿ । ದಿಗ್ಬಂಧನಾರ್ಥಂ ಗದಾಮುದ್ರಾಂ ಪ್ರದರ್ಶಯಾಮಿ ॥ ಜಲಶೋಧನಾರ್ಥಂ ಪದ್ಮಮುದ್ರಾಂ ಪ್ರದರ್ಶಯಾಮಿ ॥ ಓಂ ನಮೋ ನಾರಾಯಣಾಯೇತಿ ಮೂಲಮಂತ್ರಮಷ್ಟವಾರಂ ಜಪಿತ್ವಾ ॥

(ಕಲಶಕ್ಕೆ ತಾರ್ಕ್ಷ್ಯಾದಿ ಮುದ್ರೆಗಳನ್ನು ತೋರಿಸಿ, ನಾರಾಯಣಾಷ್ಟಾಕ್ಷರದಿಂದ 8 ಬಾರಿ ಕಲಶವನ್ನು ಅಭಿಮಂತ್ರಿಸಿ, ಮುಂದಿನ ಶ್ಲೋಕಗಳನ್ನು ಪಠಿಸಬೇಕು)

ಏಕಪಂಚಾಶದ್ವರ್ಣಾನಾಂ ಚತುರ್ವಿಂಶತಿಮೂರ್ತಯಃ ।
ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯಕಚ್ಛಪೌ ॥
ಕೋಲೋನೃಸಿಂಹಃ ಸ ವಟುರ್ಜಾಮದಗ್ನ್ಯರಘೂದ್ವಹೌ ।
ವಾಸಿಷ್ಠಯಾದವೌ ಕೃಷ್ಣಾವಾತ್ರೇಯೌ ಬುದ್ಧಕಲ್ಕಿನೌ ॥
ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶದೇವತಾಃ ।
ಏತಾಭಿಃ ಸಹಿತಾಂ ಮೂಲಮೂರ್ತಿಂ ಕುಂಭೋದಕೇ ಸುಧೀಃ ॥
ಕಲಶಃ ಕೀರ್ತಿಮಾಯುಷ್ಯಂ ಪ್ರಜ್ಞಾಂ ಮೇಧಾಂ ಶ್ರಿಯಂ ಬಲಮ್ ।
ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಸಾಧಯೇತ್ ॥
ಸರ್ವತೀರ್ಥಮಯೋ ಯಸ್ಮಾತ್ಸರ್ವಕ್ಷೇತ್ರಮಯೋ ಯತಃ ।
ಅತೋ ಹರಿಪ್ರಿಯೋಽಸಿ ತ್ವಂ ಪೂರ್ಣಕುಂಭ ನಮೋಽಸ್ತು ತೇ ॥

ಕಲಶದೇವತಾಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀ-ನಾರಾಯಣಾಯ ನಮಃ, ಧ್ಯಾನಾದಿಷೋಡಶೋಪಚಾರಪೂಜಾಂ ಸಮರ್ಪಯಾಮಿ ॥

'ಓಂ ನಮೋ ನಾರಾಯಣಾಯ' ಎಂದು ಅಷ್ಟಾಕ್ಷರಮಂತ್ರದಿಂದ ಕಲಶದ ನೀರನ್ನು 8-12 ಬಾರಿ ಅಭಿಮಂತ್ರಿಸಿ, ಉದ್ಧರಣೆಯಿಂದ ಆ ನೀರನ್ನು ಎಡಗೈಯಲ್ಲಿ ಹಿಡಿದುಕೊಂಡು ಬಲಗೈಯಲ್ಲಿ ತುಳಸೀದಳ ಅಥವಾ ಬಿಡಿಹೂವೊಂದನ್ನು ಹಿಡಿದುಕೊಂಡು, ಆ ನೀರನ್ನು ಪೂಜಾಸಾಮಗ್ರಿಗಳಿಗೆಲ್ಲಾ ಪ್ರೋಕ್ಷಿಸಿ, ಕೊನೆಗೆ ತನಗೂ ಪ್ರೋಕ್ಷಿಸಿಕೊಂಡು ಉಳಿದ ನೀರನ್ನು ಮತ್ತು ಕೈಯಲ್ಲಿರುವ ತುಳಸೀ / ಹೂವನ್ನು ಅರ್ಘ್ಯಪಾತ್ರೆಗೆ ಹಾಕಬೇಕು. ಪ್ರೋಕ್ಷಣೆ ಮಾಡಿಕೊಳ್ಳುವಾಗ "ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ । ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥" ಎಂಬ ಮಂತ್ರವನ್ನು ಹೇಳಬೇಕು.

**ಪೀಠಪೂಜಾ ।**

ಪೀಠಮಧ್ಯೇ ಪರದೇವತಾಯೈ ಶ್ರೀಲಕ್ಷ್ಮೀನಾರಾಯಣಾಯ ನಮಃ । ದೇವಸ್ಯ ವಾಮಭಾಗೇ ಗುರವೇ ವಾಯವೇ ನಮಃ । ದಕ್ಷಿಣೇ ಸರ್ವದೇವತಾಭ್ಯೋ ಬ್ರಹ್ಮರುದ್ರಾದಿಭ್ಯೋ ನಮಃ । ಪುನರ್ವಾಮೇ ಸನಕಾದಿಸರ್ವಗುರುಭ್ಯೋ ನಮಃ । ಆಗ್ನೇಯೇ ಗಂ ಗರುಡಾಯ ನಮಃ । ನೈಋತ್ಯಾಂ ವ್ಯಾಂ ವೇದವ್ಯಾಸಾಯ ನಮಃ । ವಾಯವ್ಯೇ ದುಂ ದುರ್ಗಾಯೈ ನಮಃ । ಈಶಾನ್ಯೇ ಸಂ ಸರಸ್ವತ್ಯೈ ನಮಃ ॥ ಏತಾಃ **ಪೀಠಪಾದದೇವತಾಃ** ॥ ಧರ್ಮಾಧಿಪತಯೇ ಯಮಾಯ ನಮಃ । ಜ್ಞಾನಾಧಿಪತಯೇ ವಾಯವೇ ನಮಃ । ವೈರಾಗ್ಯಾಧಿಪತಯೇ ರುದ್ರಾಯ ನಮಃ । ಐಶ್ವರ್ಯಾಧಿಪತಯೇ ಇಂದ್ರಾಯ ನಮಃ ॥ ಏತಾಃ **ಪೀಠಫಲಕದೇವತಾಃ** ॥ ಅಧರ್ಮಾಧಿಪತಯೇ ನಿರ್ಋತಯೇ ನಮಃ । ಅಜ್ಞಾನಾಧಿಪತಯೇ ದುರ್ಗಾಯೈ ನಮಃ । ಅವೈರಾಗ್ಯಾಧಿಪತಯೇ ಕಾಮಾಯ ನಮಃ । ಅನೈಶ್ವರ್ಯಾಧಿಪತಯೇ ರುದ್ರಾಯ ನಮಃ ॥ ಮಧ್ಯೇ ಪಾತಾಲೇ ಪರಮಪುರುಷಾಯ ನಮಃ । ತದುಪರ್ಯುದಕೇ ಬ್ರಹ್ಮಾಂಡಾಧಾರಾಯ ವಿಷ್ಣುಕೂರ್ಮಾಯ ನಮಃ । ತದುಪರಿ ಗರ್ಭೋದಕೇ ಕೂರ್ಮರೂಪಾಯ ವಿಷ್ಣವೇ ನಮಃ । ತತ್ಪೃಷ್ಠಾಶ್ರಿತಾಯ ವಾಯುಕೂರ್ಮಾಯ ನಮಃ । ತತ್ಪೃಷ್ಠಾಶ್ರಿತಾಯ ಸಹಸ್ರಫಣಾಮಂಡಲಮಂಡಿತಾಯ ಶ್ರೀಮದನಂತಾಯ ನಮಃ । ಪೃಥಿವ್ಯಭಿಮಾನಿನ್ಯೈ ಧರಾಯೈ ನಮಃ । ಕ್ಷೀರಸಾಗರಾಭಿಮಾನಿನೇ ವರುಣಾಯ ನಮಃ । ಶ್ವೇತದ್ವೀಪಾತ್ಮಿಕಾಯೈ ರಮಾಯೈ ನಮಃ । ತತ್ರ ನವರತ್ನಖಚಿತಚತುಸ್ತಂಭಯುಕ್ತಮಹಾಮಂಟಪಾತ್ಮಿಕಾಯೈ ಶ್ರೀಲಕ್ಷ್ಮ್ಯೈ ನಮಃ । ಪದ್ಮಾತ್ಮಿಕಾಯೈ ಶ್ರಿಯೈ ನಮಃ । ಕಂದಾತ್ಮಿಕಾಯೈ ಶ್ರಿಯೈ ನಮಃ । ನಾಳಾತ್ಮಿಕಾಯೈ ಶ್ರಿಯೈ ನಮಃ । ತತ್ಕರ್ಣಿಕಾತ್ಮಿಕಾಯೈ ಶ್ರಿಯೈ ನಮಃ ॥ ಪದ್ಮಾದ್ಬಹಿಃ ಸೂರ್ಯಮಂಡಲಾಧಿಪತಯೇ ಶ್ರೀನಾರಾಯಣಾಯ ನಮಃ । ಸೋಮಮಂಡಲಾಧಿ- ಪತಯೇ ಶ್ರೀವಿಷ್ಣವೇ ನಮಃ । ಹುತಾಶನಮಂಡಲಾಧಿಪತಯೇ ಶ್ರೀಲಕ್ಷ್ಮೀನರಸಿಂಹಾಯ ನಮಃ ॥ ದಕ್ಷಿಣೇ ಸತ್ವಾಭಿಮಾನಿನ್ಯೈ ಶ್ರಿಯೈ ನಮಃ । ವಾಮೇ ರಜೋಭಿಮಾನಿನ್ಯೈ ಧರಾಯೈ ನಮಃ । ಪೃಷ್ಠೇ ತಮೋಭಿಮಾನಿನ್ಯೈ ದುರ್ಗಾಯೈ ನಮಃ ॥ ಪೂರ್ವೇ ಆತ್ಮನೇ ನಮಃ । ದಕ್ಷಿಣೇ ಅಂತರಾತ್ಮನೇ ನಮಃ । ಪಶ್ಚಿಮೇ ಪರಮಾತ್ಮನೇ ನಮಃ । ಉತ್ತರೇ ಜ್ಞಾನಾತ್ಮನೇ ನಮಃ ॥ ವಿಮಲಾಯೈ ನಮಃ । ಉತ್ಕರ್ಷಿಣ್ಯೈ ನಮಃ । ಜ್ಞಾನಾಯೈ ನಮಃ । ಕ್ರಿಯಾಯೈ ನಮಃ । ಯೋಗಾಯೈ ನಮಃ । ಪ್ರಹ್ವ್ಯೈ ನಮಃ । ಸತ್ಯಾಯೈ ನಮಃ । ಈಶಾನಾಯೈ ನಮಃ । ಮಧ್ಯೇ ಅನುಗ್ರಹಾಯೈ ನಮಃ ॥ ಏತಾಃ ವೀಜಿತಚಾಮರಹಸ್ತಾಃ ತಿಷ್ಠಂತಿ ॥ ತಸ್ಯಾಗ್ರೇ ಸಹಸ್ರಫಣಾಮಂಡಲಮಂಡಿತಾಯ ಕುಂಡಲಾಕೃತಿಸ್ವರೂಪಾಯ ಹರೇರ್ಯೋಗ- ಪೀಠಸ್ವರೂಪಾಯ ಶ್ರೀಮದನಂತಾಯ ನಮಃ ॥ ಪೀಠಪೂಜಾಂ ಸಮರ್ಪಯಾಮಿ ॥ (ಪೀಠಕ್ಕೆ ಮಂತ್ರಾಕ್ಷತೆ ಮತ್ತು ಬಿಡಿಹೂಗಳನ್ನು ಹಾಕಬೇಕು. ಪ್ರತಿಯೊಂದು ನಾಮಗಳ ಆರಂಭದಲ್ಲಿ ಓಂಕಾರವನ್ನು ಸೇರಿಸಿಕೊಳ್ಳಬೇಕು)

## ।। ಪ್ರಾಣಪ್ರತಿಷ್ಠಾವಿಧಿಃ ।।

ಅಧೋಮುಖಂ ಹೃತ್ಕಮಲಂ ತೋರಣೋದ್ಧರಣಂ ಚರೇತ್ ।
ವಿಕಾಸ್ಯ ಜ್ಞಾನರವಿಣಾ ಕರ್ಣಿಕಾಸ್ಥಂ ಪರಂ ವಿಭುಮ್ ॥

ಹೃದಯಸ್ಥಾ ಹರೇರ್ಮೂರ್ತಿಃ ಜೀವೋ ಯತ್ಪ್ರತಿಬಿಂಬಕಃ ।
ಯದ್ವಶೇ ವರ್ತತೇ ಜೀವಃ ಸಾ ತು ಜೀವಕಲಾ ಸ್ಮೃತಾ ॥

ಜೀವಾಂತರ್ಯಾಮಿತೋ ವಿಷ್ಣುಃ ಆತ್ಮಾ ನಾಮ ಪ್ರಕೀರ್ತಿತಃ ।
ತೇಜಸ್ಸಾರಮಯೀಂ ದಿವ್ಯಾಂ ಪ್ರತಿಮಾಂ ಪ್ರತಿಮಾಗತಾಮ್ ॥

ಧ್ಯಾತ್ವಾ ಪ್ರಾಣಾಧಿಪಂ ತತ್ರ ಪ್ರತಿಮಾರೂಪಿಣಂ ಪ್ರಭುಮ್ ।
ತನ್ಮಧ್ಯೇ ರಮಯಾ ಸಾರ್ಧಮಾಸೀನಂ ಕ್ಷೀರನೀರವತ್ ॥
ಪ್ರತಿಮಾರೂಪಿಣಂ ಸಮ್ಯಗ್ಧ್ಯಾತ್ವೈವಾವಾಹಯೇತ್ಸುಧೀಃ ॥

ಓಂ ॥ ಆತ್ಮಾದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ ।
ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ॥

ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ಶ್ರೀಪುರುಷೋತ್ತಮ ।
ಆವಾಹಯಾಮಿ ಪೀಠೇ ತ್ವಾಂ ಪ್ರತಿಮಾಯಾಂ ಜಗತ್ಪತೇ ।
ಇತಿ ಸಂಪ್ರಾರ್ಥ್ಯ ದೇವೇಶಂ ಷಣ್ಮುದ್ರಾಂಶ್ಚ ಪ್ರದರ್ಶಯೇತ್ ॥

(ಹೃದಯಕಮಲದಲ್ಲಿರುವ ಶ್ರೀಹರಿಯನ್ನು ಶ್ವಾಸಮಾರ್ಗದಿಂದ ಹಸ್ತಗಳಲ್ಲಿರುವ ಪುಷ್ಪಗಳಲ್ಲಿ ಬಂದಿರುವನೆಂದು ಚಿಂತಿಸಿ, ಕಲಶ / ಪ್ರತಿಮೆಗಳ ಮೇಲೆ ಹಾಕಿ ಆವಾಹಿಸಬೇಕು)

ಓಂ ಆವಾಹಿತೋ ಭವ । ಸ್ಥಾಪಿತೋ ಭವ । ಸನ್ನಿಹಿತೋ ಭವ ।
ಅವಕುಂಠಿತೋ ಭವ । ಸುಪ್ರಸನ್ನೋ ಭವ । ವರದೋ ಭವ ॥

ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ಕರೋ ಭವ ।
ವಿಭೋ ಸಕಲಲೋಕೇಶ ದೇವದೇವ ಜಗತ್ಪತೇ ॥

ತ್ವಾಂ ಪೂಜಯಾಮಿ ಸದ್ಭಕ್ತ್ಯಾ ಭೋಗೈರರ್ಘ್ಯಾದಿಭಿಃ ಕ್ರಮಾತ್ ।
ಯಾಗಾವಸಾನಪರ್ಯಂತಂ ಅತ್ರ ಸ್ಥಿತ್ವಾ ಜಗತ್ಪತೇ ॥
ಭಕ್ತಸ್ಯ ಮಮ ಪೂಜಾಂ ಚ ಗೃಹೀತ್ವಾ ಪಾಹಿ ಮಾಂ ಪ್ರಭೋ ॥

(ಪೂಜೆಗೆ ಇಡಲು ಸಿದ್ಧಪಡಿಸಿದ ಬೆಳ್ಳಿ ಅಥವಾ ತಾಮ್ರದ ಕಲಶವನ್ನು ಅರಿಷಿಣ-ಕುಂಕುಮಗಳಿಂದ ಲಕ್ಷ್ಮೀಮುಖ ಬರೆಯುವ ಮೂಲಕ ಅಲಂಕರಿಸಿ. ಆ ಕಲಶದೊಳಗೆ

ಆಲ-ಮಾವು-ಅಶ್ವತ್ಥ-ಹಲಸು-ಹೊಂಬಾಳೆ ಎಲೆಗಳ ಕುಚ್ಚನ್ನಿಟ್ಟು,* ಸ್ವಲ್ಪ ಪಂಚಖಾದ್ಯಗಳನ್ನು ಹಾಕಿ, ಕಲಶಪೂಜೆಯ ನೀರನ್ನು ವರಲಕ್ಷ್ಮೀ ಕಲಶಕ್ಕೆ ಹಾಕಿರಿ. ಚೆನ್ನಾಗಿ ನಾರನ್ನು ತೆಗೆದ ತೆಂಗಿನಕಾಯಿಗೆ ಅರಿಷಿಣ ನೀರನ್ನು ಬಳಿದು, ಅದಕ್ಕೆ ಕುಂಕುಮವನ್ನಿಟ್ಟು, ಜೊತೆಗೆ ಲಕ್ಷ್ಮೀ ಪಟವನ್ನು ಮಂಟಪದಲ್ಲಿಟ್ಟು ಸಿದ್ಧಪಡಿಸಿಕೊಳ್ಳಿ)

**ಅಥ ಧ್ಯಾನಮ್ ।**

ಕುಂಕುಮೋಪರಿ ಲಿಪ್ತಾಂಗಾಂ ಸರ್ವಾಭರಣಭೂಷಿತಾಂ ।
ನೀಲಕಂಠಪ್ರಿಯಾಂ ಗೌರೀಂ ವಂದೇऽಹಂ ಮಂಗಲಾಹ್ವಯಾಂ ॥
ಶ್ರೀಮಂಗಳಗೌರ್ಯೈ ನಮಃ । ಧ್ಯಾಯಾಮಿ, ಧ್ಯಾನಂ ಸಮರ್ಪಯಾಮಿ ॥

**ಆಸನಮ್ ।**

ಸ್ವರ್ಣೇನ ಚಾಸನಂ ದಿವ್ಯಂ ರತ್ನಮಾಣಿಕ್ಯಶೋಭಿತಂ ।
ಮಯಾऽऽನೀತಂ ಗೃಹಾಣ ತ್ವಂ ಗೌರಿ ಕಾಮಾರಿವಲ್ಲಭೇ ॥
ಶ್ರೀಮಂಗಳಗೌರ್ಯೈ ನಮಃ । ಆಸನಾರ್ಥೇ ಅಕ್ಷತಾನ್ ಸಮರ್ಪಯಾಮಿ ॥
(ಅಕ್ಷತೆಯನ್ನು ಸಮರ್ಪಿಸಬೇಕು)

**ಪಾದ್ಯಮ್ ।**

ಗಂಗಾದಿಸರ್ವತೀರ್ಥೇಭ್ಯೋ ಮಯಾ ಪ್ರಾರ್ಥನಯಾಹೃತಂ ।
ತೋಯಮೇತತ್ ಸುಖಸ್ಪರ್ಶಂ ಪಾದ್ಯಾರ್ಥಂ ಪ್ರತಿಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । ಪಾದಯೋಃ ಪಾದ್ಯಂ ಸಮರ್ಪಯಾಮಿ ॥
(ಉದ್ಧರಣೆಯಿಂದ ನೀರನ್ನು ತೋರಿಸಿ, ಅರ್ಘ್ಯಪಾತ್ರೆಗೆ ಬಿಡಬೇಕು)

**ಅರ್ಘ್ಯಮ್ ।**

ಗಂಧಪುಷ್ಪಾಕ್ಷತೈರ್ಯುಕ್ತಂ ಅರ್ಘ್ಯಂ ಸಂಪಾದಿತಂ ಮಯಾ ।
ಗೃಹಾಣ ಮಂಗಲೇ ಗೌರಿ ಪ್ರಸನ್ನಾ ಭವ ಸರ್ವದಾ ॥
ಶ್ರೀಮಂಗಳಗೌರ್ಯೈ ನಮಃ । ಅರ್ಘ್ಯಂ ಸಮರ್ಪಯಾಮಿ ॥
(ಉದ್ಧರಣೆಯಿಂದ ನೀರನ್ನು ತೋರಿಸಿ, ಅರ್ಘ್ಯಪಾತ್ರೆಗೆ ಬಿಡಬೇಕು)

**ಆಚಮನೀಯಮ್ ।**

ಕಾಮಾರಿವಲ್ಲಭೇ ದೇವಿ ಕುರ್ವಾಚಮನಮಂಬಿಕೇ ।
ನಿರಂತರಮಹಂ ವಂದೇ ಚರಣೌ ತವ ಪಾರ್ವತಿ ॥
ಶ್ರೀಮಂಗಳಗೌರ್ಯೈ ನಮಃ । ಆಚಮನೀಯಂ ಸಮರ್ಪಯಾಮಿ ॥
(ಉದ್ಧರಣೆಯಿಂದ ನೀರನ್ನು ತೋರಿಸಿ, ಅರ್ಘ್ಯಪಾತ್ರೆಗೆ ಬಿಡಬೇಕು)

---

* ಪಂಚಪಲ್ಲವಗಳು : ಅಶ್ವತ್ಥ, ಹತ್ತಿ, ಗೋಳಿ, ಮಾವು, ಆಲ.
ಪಂಚರತ್ನಗಳು : ಚಿನ್ನ, ವಜ್ರ, ನೀಲಮಣಿ, ಪದ್ಮರಾಗಮಣಿ, ಮುತ್ತು.

**ಮಧುಪರ್ಕಃ ।**

ದಧ್ಯಾಜ್ಯಮಧುಸಂಯುಕ್ತಂ ಸ್ವರ್ಣಪಾತ್ರಸ್ಥಿತಂ ಶುಭಮ್ ।
ಮಧುಪರ್ಕಂ ಗೃಹಾಣೇದಂ ಸರ್ವಾಭೀಷ್ಟಪ್ರದಾಯಿನಿ ।
ಶ್ರೀಮಂಗಳಗೌರ್ಯೈ ನಮಃ । ಮಧುಪರ್ಕಂ ಸಮರ್ಪಯಾಮಿ ॥
ಪುನರಾಚಮನಂ ಸಮರ್ಪಯಾಮಿ ॥
(ಮೊಸರು, ತುಪ್ಪ, ಜೇನುತುಪ್ಪ ಇವುಗಳ ಮಿಶ್ರಣವನ್ನು ಹೂವಿನಲ್ಲಿ ಅದ್ದಿ ದೇವಿಗೆ ಸಮರ್ಪಿಸಬೇಕು)

**ಸ್ನಾನಮ್ ।**

ಮಂದಾಕಿನ್ಯಾಃ ಸಮಾನೀತಂ ಜಲಂ ಕರ್ಪೂರಸಂಯುತಂ ।
ಸ್ನಪಯಾಮಿ ಸುರಶ್ರೇಷ್ಠೇ ತ್ವಾಂ ಪುತ್ರಾದಿಫಲಪ್ರದಾಂ ॥
ಶ್ರೀಮಂಗಳಗೌರ್ಯೈ ನಮಃ । ಸ್ನಾನಂ ಸಮರ್ಪಯಾಮಿ ॥
(ಹೂವಿನಲ್ಲಿ ನೀರನ್ನು ಅದ್ದಿ ದೇವಿಗೆ ಚಿಮುಕಿಸಬೇಕು)

**ಅಥ ಪಂಚಾಮೃತಸ್ನಾನಂ ।**

ಸೌರಭೇಯ್ಯಾ ಮಹದ್ದಿವ್ಯಂ ಪವಿತ್ರಂ ಪುಷ್ಟಿವರ್ಧನಂ ।
ಸ್ನಾನಾರ್ಥಂ ತೇ ಮಯಾ ದತ್ತಂ ಗೃಹಾಣೇದಂ ನಮೋಽಸ್ತು ತೇ ॥
ಶ್ರೀಮಂಗಳಗೌರ್ಯೈ ನಮಃ **ಪಯಃಸ್ನಾನಂ** ಸಮರ್ಪಯಾಮಿ ॥

ಚಂದ್ರಮಂಡಲಸಂಕಾಶಂ ಸರ್ವದೇವಪ್ರಿಯಂ ದಧಿ ।
ಸ್ನಾನಾರ್ಥಂ ತೇ ಪ್ರಯಚ್ಛಾಮಿ ಪ್ರೀತಾ ಭವ ಸುರೇಶ್ವರಿ ॥
ಶ್ರೀಮಂಗಳಗೌರ್ಯೈ ನಮಃ **ದಧಿಸ್ನಾನಂ** ಸಮರ್ಪಯಾಮಿ ॥

ಘೃತಕುಂಭಸಮಾಯುಕ್ತೇ ಘೃತಯೋನೇ ಘೃತಪ್ರಿಯೇ ।
ಘೃತಭುಗ್ ಘೃತಧಾಮಾಸಿ ಘೃತಂ ಸ್ನಾನಾಯ ಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ **ಘೃತಸ್ನಾನಂ** ಸಮರ್ಪಯಾಮಿ ॥ S।

ಸರ್ವೌಷಧಿಸಮುತ್ಪನ್ನಂ ಪೀಯೂಷಸದೃಶಂ ಮಧು ।
ಸ್ನಾನಾರ್ಥಂ ತೇ ಮಯಾ ದತ್ತಂ ಗೃಹಾಣ ಪರಮೇಶ್ವರಿ ॥
ಶ್ರೀಮಂಗಳಗೌರ್ಯೈ ನಮಃ **ಮಧುಸ್ನಾನಂ** ಸಮರ್ಪಯಾಮಿ ॥

ಇಕ್ಷುದಂಡಸಮುತ್ಪನ್ನಾ ರಸ್ಯಾ ಸ್ನಿಗ್ಧತರಾ ಶುಭಾ ।
ಶರ್ಕರೇಯಂ ಮಯಾ ದತ್ತಾ ಸ್ನಾನಾರ್ಥಂ ಪ್ರತಿಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । **ಶರ್ಕರಾಸ್ನಾನಂ** ಸಮರ್ಪಯಾಮಿ ॥
(ಈ ಮೇಲೆ ತಿಳಿಸಿರುವಂತೆ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಹಣ್ಣು ಇವುಗಳಿಂದ ದೇವಿಗೆ ಪಂಚಾಮೃತಾಭಿಷೇಕ ಮಾಡಬೇಕು)

**ಮಹಾಭಿಷೇಕಃ ।**

ಗಂಗಾಜಲಂ ಸಮಾನೀತಂ ಸುವರ್ಣಕಲಶೇ ಸ್ಥಿತಂ ।
ಸುಗಂಧದ್ರವ್ಯಸಂಯುಕ್ತಂ ಗೃಹಾಣ ದುರಿತಾಪಹೇ ॥
ಮಲಯಾಚಲಸಂಭೂತಂ ಚಂದನಾಗರುವಾಸಿತಂ ।
ತೋಯಮೇತತ್ಸುಖಸ್ಪರ್ಶಂ ಸ್ನಾನಾರ್ಥಂ ಪ್ರತಿಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । ಮಹಾಭಿಷೇಕಸ್ನಾನಂ ಸಮರ್ಪಯಾಮಿ ॥
(ಕಲಶೋದಕದಲ್ಲಿ ಹೂವನ್ನು ಅದ್ದಿ ದೇವಿಗೆ ಚಿಮುಕಿಸಬೇಕು)

**ವಸ್ತ್ರಮ್ ।**

ವಸ್ತ್ರಂ ಚ ಸೋಮದೈವತ್ಯಂ ಲಜ್ಜಾಯಾಸ್ತು ನಿವಾರಣಂ ।
ಮಯಾ ನಿವೇದಿತಂ ಭಕ್ತ್ಯಾ ಗೃಹಾಣ ಪರಮೇಶ್ವರಿ ॥
ಶ್ರೀಮಂಗಳಗೌರ್ಯೈ ನಮಃ । ವಸ್ತ್ರೋಪವಸ್ತ್ರಂ ಸಮರ್ಪಯಾಮಿ ॥
(ದೇವಿಗೆ ಗೆಜ್ಜೆವಸ್ತ್ರವನ್ನು ಸಮರ್ಪಿಸಬೇಕು)

**ಕಂಚುಕಮ್ ।**

ನವರತ್ನಾದಿಭಿರ್ಬದ್ಧಾಂ ಸೌವರ್ಣೇನ ಚ ತಂತುಭಿಃ ॥
ನಿರ್ಮಿತಾಂ ಕಂಚುಕೀಂ ಭಕ್ತ್ಯಾ ಗೃಹಾಣ ಪರಮೇಶ್ವರಿ ॥
ಶ್ರೀಮಂಗಳಗೌರ್ಯೈ ನಮಃ । ಕಂಚುಕೀಂ ಸಮರ್ಪಯಾಮಿ ॥
(ದೇವಿಗೆ ಕುಪ್ಪಸವನ್ನು ಸಮರ್ಪಿಸಬೇಕು)

**ಚಂದನಮ್ ।**

ಕುಂಕುಮಾಗರುಕರ್ಪೂರಕಸ್ತೂರೀ ಚಂದನಂ ತಥಾ ।
ವಿಲೇಪನಂ ಮಹಾದೇವಿ ಗಂಧಂ ದಾಸ್ಯಾಮಿ ಭಕ್ತಿತಃ ॥
ಶ್ರೀಮಂಗಳಗೌರ್ಯೈ ನಮಃ । ವಿಲೇಪನಾರ್ಥೇ ಚಂದನಂ ಸಮರ್ಪಯಾಮಿ ॥
(ದೇವಿಗೆ ಹರಿನಿವೇದಿತ ಗಂಧವನ್ನು ಅರ್ಪಿಸಬೇಕು)

**ಅಕ್ಷತಾಃ ।**

ಅಕ್ಷತಾಂಶ್ಚ ಸುರಶ್ರೇಷ್ಠೇ ಕುಂಕುಮೇನ ವಿರಾಜಿತಾಃ ।
ಮಯಾ ನಿವೇದಿತಾ ಭಕ್ತ್ಯಾ ಗೃಹಾಣ ಪರಮೇಶ್ವರಿ ॥
ಶ್ರೀಮಂಗಳಗೌರ್ಯೈ ನಮಃ । ಅಕ್ಷತಾನ್ ಸಮರ್ಪಯಾಮಿ ॥
(ಮಂತ್ರಾಕ್ಷತೆಯನ್ನು ದೇವಿಗೆ ಸಮರ್ಪಿಸಬೇಕು)

**ಅರಿಷಿಣ ।**

ಹರಿದ್ರಾ ಸರ್ವವರ್ಣಾಭಾ ಸರ್ವಸೌಭಾಗ್ಯದಾಯಿನೀ ।
ಸರ್ವಾಲಂಕಾರಮುಖ್ಯಾ ಹಿ ದೇವಿ ತ್ವಂ ಪ್ರತಿಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । ಹರಿದ್ರಾಂ ಸಮರ್ಪಯಾಮಿ ॥
(ದೇವಿಗೆ ಅರಿಷಿಣವನ್ನು ಸಮರ್ಪಿಸಬೇಕು)

**ಕುಂಕುಮ ।**

ಹರಿದ್ರಾಚೂರ್ಣಸಂಯುಕ್ತಂ ಕುಂಕುಮಂ ಕಾಮದಾಯಕಂ ।
ವಸ್ತ್ರಾಲಂಕರಣಂ ಸರ್ವಂ ದೇವಿ ತ್ವಂ ಪ್ರತಿಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । ಕುಂಕುಮಂ ಸಮರ್ಪಯಾಮಿ ॥
(ದೇವಿಗೆ ಕುಂಕುಮವನ್ನು ಸಮರ್ಪಿಸಬೇಕು)

**ಕಜ್ಜಲಮ್ ।**

ಕಜ್ಜಲಂ ದೀಪಸಂಭೂತಂ ಸ್ತ್ರೀಣಾಂ ಲೋಚನಭೂಷಣಂ ।
ನೇತ್ರಯೋಃ ಸುಖದಂ ಚೈವ ಮಯಾ ದತ್ತಂ ಪ್ರಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । ಕಜ್ಜಲಂ ಸಮರ್ಪಯಾಮಿ ॥
(ದೇವಿಗೆ ಕಾಡಿಗೆಯನ್ನು ಸಮರ್ಪಿಸಬೇಕು)

**ಸಿಂಧೂರಮ್ ।**

ಉದಿತಾರುಣಸಂಕಾಶಂ ಜಪಾಕುಸುಮಸನ್ನಿಭಂ ।
ಸೀಮಂತಭೂಷಣಾರ್ಥಾಯ ಸಿಂಧೂರಂ ಪ್ರತಿಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । ಸಿಂಧೂರಂ ಸಮರ್ಪಯಾಮಿ ॥
(ದೇವಿಗೆ ಸಿಂಧೂರವನ್ನು ಸಮರ್ಪಿಸಬೇಕು)

**ಆಭರಣಮ್ ।**

ವಜ್ರಮಾಣಿಕ್ಯವೈಡೂರ್ಯಮುಕ್ತಾವಿದ್ರುಮಮಂಡಿತಂ ।
ಪುಷ್ಪರಾಗ ಸಮಾಯುಕ್ತಂ ಭೂಷಣಂ ಪ್ರತಿಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । ಭೂಷಣಾದಿ ಸಮರ್ಪಯಾಮಿ ॥
(ದೇವಿಗೆ ಆಭರಣಗಳನ್ನು ತೊಡಿಸಬೇಕು)

**ಪರಿಮಳದ್ರವ್ಯಮ್ ।**

ನಾನಾಸುಗಂಧಿಕಂ ದ್ರವ್ಯಂ ಚೂರ್ಣೀಕೃತ್ಯ ಪ್ರಯತ್ನತಃ ।
ದದಾಮಿ ತೇ ನಮಸ್ತುಭ್ಯಂ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । ನಾನಾವಿಧ ಪರಿಮಳದ್ರವ್ಯಾಣಿ ಸಮರ್ಪಯಾಮಿ ॥
(ದೇವಿಗೆ ಪರಿಮಳದ್ರವ್ಯಗಳನ್ನು ಸಮರ್ಪಿಸಬೇಕು)

**ಪುಷ್ಪಾಣಿ ।**

ಮಾಲ್ಯಾದೀನಿ ಸುಗಂಧೀನಿ ಮಾಲತ್ಯಾದೀನಿ ವೈ ಪ್ರಭೋ ।
ಮಯಾಽಽಹೃತಾನಿ ಪೂಜಾರ್ಥಂ ಪುಷ್ಪಾಣಿ ಪ್ರತಿಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । ಪೂಜಾರ್ಥೇ ನಾನಾವಿಧಪುಷ್ಪಾಣಿ ಸಮರ್ಪಯಾಮಿ ॥
(ದೇವಿಗೆ ಹೂವುಗಳನ್ನು ಸಮರ್ಪಿಸಬೇಕು)

**ಆವರಣಪೂಜಾ ।**

ಪೀಠಮಧ್ಯೇ ಪರದೇವತಾಯೈ ಶ್ರೀಲಕ್ಷ್ಮೀನಾರಾಯಣಾಯ ನಮಃ ॥

1) ದೇವಸ್ಯ ವಾಮಪಾರ್ಶ್ವಸ್ಥಿತಾಯೈ ಸುವರ್ಣವರ್ಣಾಯೈ ದುಕೂಲವಸನಾಯೈ ಪದ್ಮಹಸ್ತಾಯೈ ವಿಚಿತ್ರಾಭರಣಭೂಷಿತಾಯೈ ತನ್ಮುಖನ್ಯಸ್ತಲೋಚನಾಯೈ ಲಂ ಲಕ್ಷ್ಮ್ಯೈ ನಮಃ ॥

ದೇವಸ್ಯ ದಕ್ಷಿಣಪಾರ್ಶ್ವಸ್ಥಿತಾಯೈ ದೂರ್ವಾದಳಶ್ಯಾಮಲಾಯೈ ಪೀತಾಂಬರ-ವಸನಾಯೈ ಕುಮುದಹಸ್ತಾಯೈ ತನ್ಮುಖನ್ಯಸ್ತಲೋಚನಾಯೈ ಧಂ ಧರಾಯೈ ನಮಃ ॥

2) ಪೂರ್ವಾದಿದಿಕ್ಷು - ಕೃದ್ಧೋಲ್ಕಾಯ ನಮಃ । ಮಹೋಲ್ಕಾಯ ನಮಃ । ವೀರೋಲ್ಕಾಯ ನಮಃ । ದ್ಯುಲ್ಕಾಯ ನಮಃ । ಸಹಸ್ರೋಲ್ಕಾಯ ನಮಃ ॥ (ಇತಿ ಪ್ರಥಮಾವರಣಮ್)

3) ಆಗ್ನೇಯಾದಿವಿದಿಕ್ಷು - ವಾಸುದೇವಾಯ ನಮಃ, ಮಾಯಾಯೈ ನಮಃ । ಸಂಕರ್ಷಣಾಯ ನಮಃ, ಜಯಾಯೈ ನಮಃ । ಪ್ರದ್ಯುಮ್ನಾಯ ನಮಃ, ಕೃತ್ಯೈ ನಮಃ । ಅನಿರುದ್ಧಾಯ ನಮಃ, ಶಾಂತ್ಯೈ ನಮಃ ॥ (ಇತಿ ದ್ವಿತೀಯಾವರಣಮ್)

4) ಕೇಶವಾಯ ನಮಃ, ನಾರಾಯಣಾಯ ನಮಃ, ಮಾಧವಾಯ ನಮಃ, ಗೋವಿಂದಾಯ ನಮಃ, ವಿಷ್ಣವೇ ನಮಃ, ಮಧುಸೂದನಾಯ ನಮಃ, ತ್ರಿವಿಕ್ರಮಾಯ ನಮಃ, ವಾಮನಾಯ ನಮಃ, ಶ್ರೀಧರಾಯ ನಮಃ, ಹೃಷೀಕೇಶಾಯ ನಮಃ, ಪದ್ಮನಾಭಾಯ ನಮಃ, ದಾಮೋದರಾಯ ನಮಃ ॥ (ಇತಿ ತೃತೀಯಾವರಣಮ್)

ಸಂಕರ್ಷಣಾಯ ನಮಃ, ವಾಸುದೇವಾಯ ನಮಃ, ಪ್ರದ್ಯುಮ್ನಾಯ ನಮಃ, ಅನಿರುದ್ಧಾಯ ನಮಃ, ಪುರುಷೋತ್ತಮಾಯ ನಮಃ, ಅಧೋಕ್ಷಜಾಯ ನಮಃ, ನಾರಸಿಂಹಾಯ ನಮಃ, ಅಚ್ಯುತಾಯ ನಮಃ, ಜನಾರ್ದನಾಯ ನಮಃ, ಉಪೇಂದ್ರಾಯ ನಮಃ, ಹರಯೇ ನಮಃ, ಶ್ರೀಕೃಷ್ಣಾಯ ನಮಃ ॥ (ಇತಿ ಚತುರ್ಥಾವರಣಮ್)

5) ಮತ್ಸ್ಯಾಯ ನಮಃ, ಕೂರ್ಮಾಯ ನಮಃ, ವರಾಹಾಯ ನಮಃ, ನಾರಸಿಂಹಾಯ ನಮಃ, ವಾಮನಾಯ ನಮಃ, ಭಾರ್ಗವಾಯ ನಮಃ, ರಾಮಾಯ ನಮಃ, ಕೃಷ್ಣಾಯ ನಮಃ, ಬುದ್ಧಾಯ ನಮಃ, ಕಲ್ಕಿನೇ ನಮಃ, ಅನಂತಾಯ ನಮಃ, ವಿಶ್ವರೂಪಾಯ ನಮಃ ॥ (ಇತಿ ಪಂಚಮಾವರಣಮ್)

6) ಅನಂತಾಯ ನಮಃ, ವಾರುಣ್ಯೈ ನಮಃ, ಬ್ರಹ್ಮಣೇ ನಮಃ, ಸರಸ್ವತ್ಯೈ ನಮಃ । ವಾಯವೇ ನಮಃ, ಭಾರತ್ಯೈ ನಮಃ । ಈಶಾನಾಯ ನಮಃ, ಗಿರಿಜಾಯೈ ನಮಃ । ದೇವಸ್ಯಾಗ್ರೇ ಗರುಡಾಯ ನಮಃ, ವಾಮಭಾಗೇ ಸೌಪರ್ಣ್ಯೈ ನಮಃ ॥ (ಇತಿ ಷಷ್ಠಾವರಣಮ್)

7) ಇಂದ್ರಾಯ ಸುರಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ಅಗ್ನಯೇ ತೇಜೋಽಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ಯಮಾಯ ಧರ್ಮಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ನಿರ್ಋತಯೇ ರಕ್ಷೋಽಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ವರುಣಾಯ ಜಲಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ಕುಬೇರಾಯ ಧನಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ಈಶಾನಾಯ ಭೂತಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ । ಅಧಃ ॥
ಶೇಷಾಯ ನಾಗಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ । ಊರ್ಧ್ವಮ್ ॥
ಬ್ರಹ್ಮಣೇ ಸತ್ಯಲೋಕಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ । ತನ್ಮಧ್ಯೇ ॥
ಇತಿ ಆವರಣಪೂಜಾಂ ಸಮರ್ಪಯಾಮಿ ॥
(ಆವರಣಪೂಜಾಂಗವಾಗಿ ದೇವರ ಪಾದಗಳಲ್ಲಿ ಪುಷ್ಪಗಳನ್ನು ಪ್ರತಿಯೊಂದು ಆವರಣಕ್ಕೂ ಹಾಕಬೇಕು. ಪ್ರತಿಯೊಂದು ನಾಮಗಳ ಆರಂಭದಲ್ಲಿ ಓಂಕಾರವನ್ನು ಸೇರಿಸಿಕೊಳ್ಳಬೇಕು)

**ಅಥ ಅಂಗಪೂಜಾ ।**

ಓಂ ಉಮಾಯೈ ನಮಃ, ಪಾದೌ (ಕಾಲು) ಪೂಜಯಾಮಿ ।
ಓಂ ಗೌರ್ಯೈ ನಮಃ, ಜಂಘೇ (ಮೊಳಕಾಲು) ಪೂಜಯಾಮಿ ।
ಓಂ ಪಾರ್ವತ್ಯೈ ನಮಃ, ಜಾನುನೀ (ಮಂಡಿ) ಪೂಜಯಾಮಿ ।
ಓಂ ಜಗದ್ಧಾತ್ರ್ಯೈ ನಮಃ, ಊರೂ (ತೊಡೆ) ಪೂಜಯಾಮಿ ।
ಓಂ ಜಗತ್ಪ್ರತಿಷ್ಠಾಯೈ ನಮಃ, ಕಟಿಂ (ಸೊಂಟ) ಪೂಜಯಾಮಿ ।
ಓಂ ಶಾಂತಿರೂಪಿಣ್ಯೈ ನಮಃ, ನಾಭಿಂ (ಪೊಕ್ಕಳು) ಪೂಜಯಾಮಿ ।
ಓಂ ದೇವ್ಯೈ ನಮಃ, ಉದರಂ (ಹೊಟ್ಟೆ) ಪೂಜಯಾಮಿ ।
ಓಂ ಲೋಕವಂದ್ಯೈ ನಮಃ, ಸ್ತನೌ (ಸ್ತನ) ಪೂಜಯಾಮಿ ।
ಓಂ ಕಾಲ್ಯೈ ನಮಃ, ಕಂಠಂ (ಕುತ್ತಿಗೆ) ಪೂಜಯಾಮಿ ।
ಓಂ ಶಿವಾಯೈ ನಮಃ, ಮುಖಂ (ಮುಖ) ಪೂಜಯಾಮಿ ।
ಓಂ ಭವಾನ್ಯೈ ನಮಃ, ನೇತ್ರೇ (ಕಣ್ಣು) ಪೂಜಯಾಮಿ ।
ಓಂ ರುದ್ರಾಣ್ಯೈ ನಮಃ, ಕರ್ಣೌ (ಕಿವಿ) ಪೂಜಯಾಮಿ ।
ಓಂ ಮಹಾದೇವ್ಯೈ ನಮಃ, ಲಲಾಟಂ (ಹಣೆ) ಪೂಜಯಾಮಿ ।
ಓಂ ಮಂಗಲದಾತ್ರ್ಯೈ ನಮಃ, ಶಿರಃ (ತಲೆ) ಪೂಜಯಾಮಿ ।
ಓಂ ಪುತ್ರದಾಯಿನ್ಯೈ ನಮಃ, ಸರ್ವಾಂಗಂ (ಎಲ್ಲ ಅಂಗಗಳು) ಪೂಜಯಾಮಿ ॥

**ಅಥ ಪತ್ರಪೂಜಾ ।**

ಅಪಾಮಾರ್ಗಸ್ಯ ಪತ್ರೈಶ್ಚ ದೂರ್ವಾಧತ್ತೂರಸಂಜ್ಞಕೈಃ ।
ದೂರ್ವಾಷೋಡಶಸಂಖ್ಯಾಕೈಃ ಬಿಲ್ವಪತ್ರಾಣಿ ಪಂಚ ಚ ॥

ಓಂ ಗೌರ್ಯೈ ನಮಃ, ಮಾಲತೀಪತ್ರಂ ಸಮರ್ಪಯಾಮಿ ।
ಓಂ ಪಾರ್ವತ್ಯೈ ನಮಃ, ಭೃಂಗರಾಜಪತ್ರಂ ಸಮರ್ಪಯಾಮಿ ।
ಓಂ ಜಗದ್ಧಾತ್ರ್ಯೈ ನಮಃ, ಬಿಲ್ವಪತ್ರಂ ಸಮರ್ಪಯಾಮಿ ।
ಓಂ ಜಗತ್ಪ್ರಭಾಯೈ ನಮಃ, ಬದರೀಪತ್ರಂ ಸಮರ್ಪಯಾಮಿ ।
ಓಂ ಶಾಂತಿರೂಪಿಣ್ಯೈ ನಮಃ, ಧತ್ತೂರಪತ್ರಂ ಸಮರ್ಪಯಾಮಿ ।
ಓಂ ದೇವ್ಯೈ ನಮಃ, ತುಲಸೀಪತ್ರಂ ಸಮರ್ಪಯಾಮಿ ।
ಓಂ ಲೋಕವಂದಿತಾಯೈ ನಮಃ, ಶಮೀಪತ್ರಂ ಸಮರ್ಪಯಾಮಿ ।
ಓಂ ಕಾಲ್ಯೈ ನಮಃ, ಅಪಾಮಾರ್ಗಪತ್ರಂ ಸಮರ್ಪಯಾಮಿ ।
ಓಂ ಶಿವಾಯೈ ನಮಃ, ಬೃಹತೀಪತ್ರಂ ಸಮರ್ಪಯಾಮಿ ।
ಓಂ ಭವಾನ್ಯೈ ನಮಃ, ಕರವೀರಪತ್ರಂ ಸಮರ್ಪಯಾಮಿ ।
ಓಂ ರುದ್ರಾಣ್ಯೈ ನಮಃ, ಅರ್ಕಪತ್ರಂ ಸಮರ್ಪಯಾಮಿ ।

ಓಂ ಶರ್ವಾಣ್ಯೈ ನಮಃ, ಅರ್ಜುನಪತ್ರಂ ಸಮರ್ಪಯಾಮಿ ।
ಓಂ ಮಂಗಲದಾತ್ರ್ಯೈ ನಮಃ, ವಿಷ್ಣುಕ್ರಾಂತಪತ್ರಂ ಸಮರ್ಪಯಾಮಿ ।
ಓಂ ಮಂಗಳಗೌರ್ಯೈ ನಮಃ, ನಾನಾವಿಧಪತ್ರಾಣಿ ಸಮರ್ಪಯಾಮಿ ॥

**ಧೂಪಃ ।**

ವನಸ್ಪತ್ಯುದ್ಭವೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।
ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಮ್ ॥
ಶ್ರೀಮಂಗಳಗೌರ್ಯೈ ನಮಃ । ಧೂಪಮಾಘ್ರಾಪಯಾಮಿ ॥
(ದೇವಿಗೆ ಧೂಪದಿಂದ ಆರತಿಯನ್ನು ಮಾಡಬೇಕು)

**ದೀಪಮ್ ।**

ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।
ದೀಪಂ ಗೃಹಾಣ ದೇವೇಶಿ ತ್ರೈಲೋಕ್ಯತಿಮಿರಾಪಹೇ ॥
ಶ್ರೀಮಂಗಳಗೌರ್ಯೈ ನಮಃ । ಏಕಾರ್ತಿಕ್ಯಂ ದೀಪಂ ದರ್ಶಯಾಮಿ ॥
(ದೇವಿಗೆ ಮೂರು ಬತ್ತಿಗಳಿಂದ ಆರತಿಯನ್ನು ಮಾಡಿ ಶಮನಗೊಳಿಸಬೇಕು)

**ನೈವೇದ್ಯಮ್ ।**

ಅನ್ನಂ ಚತುರ್ವಿಧಂ ಸ್ವಾದುರಸೈಃ ಷಡ್ಭಿಃ ಸಮನ್ವಿತಂ ।
ಭಕ್ಷ್ಯಭೋಜ್ಯಸಮಾಯುಕ್ತಂ ನೈವೇದ್ಯಂ ಪ್ರತಿಗೃಹ್ಯತಾಂ ॥
ಶ್ರೀಮಂಗಳಗೌರ್ಯೈ ನಮಃ । *ಭಕ್ಷಭೋಜ್ಯನೈವೇದ್ಯಂ ಸಮರ್ಪಯಾಮಿ ॥
(ದೇವಿಗೆ ನೈವೇದ್ಯವನ್ನು ಸಮರ್ಪಿಸಬೇಕು)

ಪ್ರಾಣಾಯ ಸ್ವಾಹಾ । ಅಪಾನಾಯ ನಮಃ । ವ್ಯಾನಾಯ ನಮಃ । ಉದಾನಾಯ ನಮಃ । ಸಮಾನಾಯ ನಮಃ । ಬ್ರಹ್ಮಣೇ ನಮಃ । ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ । ಉತ್ತರಾಪೋಶನಂ ಸಮರ್ಪಯಾಮಿ । ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಮುಖಪ್ರಕ್ಷಾಲನಂ ಸಮರ್ಪಯಾಮಿ । ಕರೋದ್ವರ್ತನಾರ್ಥೇ ಚಂದನಂ ಸಮರ್ಪಯಾಮಿ ॥

(ಎಂದು ಒಂದೊಂದು ಮಂತ್ರವನ್ನು ಹೇಳುತ್ತಾ ಉದ್ಧರಣೆಯಿಂದ ನೀರನ್ನು ಬಿಡಬೇಕು)

* ವಿ.ಸೂ. : ಶ್ರೀಹರಿ, ಲಕ್ಷ್ಮೀದೇವಿ, ಪ್ರಾಣದೇವರು ಇವರಿಗೆ ನೈವೇದ್ಯ ಮಾಡಿ, ನಂತರ ಬೇರೆ ತಟ್ಟೆಯಲ್ಲಿ ಪದಾರ್ಥಗಳನ್ನು ಬಡಿಸಿ, ಶಿವಪಾರ್ವತಿಯರಿಗೆ ನೈವೇದ್ಯ ಮಾಡಬೇಕು.

**ತಾಂಬೂಲಮ್ ।**

ಪೂಗೀಫಲಂ ಮಹದ್ದಿವ್ಯಂ ನಾಗವಲ್ಲೀದಲೈರ್ಯುತಮ್ ।
ಕರ್ಪೂರೈಲಾ ಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥
ಶ್ರೀಮಂಗಳಗೌರ್ಯೈ ನಮಃ । ಪೂಗೀಫಲತಾಂಬೂಲಂ ಸಮರ್ಪಯಾಮಿ ॥
(ದೇವಿಗೆ ಎಲೆ-ಅಡಿಕೆಯನ್ನು ನೈವೇದ್ಯ ಮಾಡಬೇಕು)

**ಪೂರ್ಣಫಲಮ್ ।**

ಇದಂ ಫಲಂ ಮಯಾ ದೇವಿ ಸ್ಥಾಪಿತಂ ಪುರತಸ್ತವ ।
ತೇನ ಮೇ ಸಕಲಾವಾಪ್ತಿಃ ಭವೇಜ್ಜನ್ಮನಿ ಜನ್ಮನಿ ॥
ಶ್ರೀಮಂಗಳಗೌರ್ಯೈ ನಮಃ । ಪೂರ್ಣಫಲಂ ಸಮರ್ಪಯಾಮಿ ॥
(ದೇವಿಗೆ ಪೂರ್ಣಫಲವನ್ನು ಸಮರ್ಪಿಸಬೇಕು)

**ದಕ್ಷಿಣಾಃ ।**

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।
ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥
ಶ್ರೀಮಂಗಳಗೌರ್ಯೈ ನಮಃ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ॥
(ದೇವಿಗೆ ತಾಂಬೂಲದಲ್ಲಿ ದಕ್ಷಿಣೆಯನ್ನು ಸಮರ್ಪಿಸಿರಿ)

**ಮಹಾನೀರಾಜನಮ್ ।**

ಚಂದ್ರಾದಿತ್ಯೌ ಚ ಧರಣೀ ವಿದ್ಯುದಗ್ನಿಸ್ತಥೈವ ಚ ।
ತ್ವಮೇವ ಸರ್ವಜ್ಯೋತೀಂಷಿ ಆರ್ತಿಕ್ಯಂ ಪ್ರತಿಗೃಹ್ಯತಾಮ್॥
ಶ್ರೀಮಂಗಳಗೌರ್ಯೈ ನಮಃ । ಮಹಾನೀರಾಜನ ದೀಪಂ ಸಮರ್ಪಯಾಮಿ ॥
(ದೇವರಿಗೆ 5 ಬತ್ತಿಯಿರುವ ಹಲಗಾರತಿಯಿಂದ ಮಂಗಳಾರತಿಯನ್ನು ಮಾಡಬೇಕು)

**ಮಂತ್ರಪುಷ್ಪಾಂಜಲಿಃ ।**

ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ ।
ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾಃ ಸ್ಮೃತಾ ॥
ಶ್ರೀಮಂಗಳಗೌರ್ಯೈ ನಮಃ । ಮಂತ್ರಪುಷ್ಪಾಂಜಲಿಂ ಸಮರ್ಪಯಾಮಿ ॥
(ದೇವರಿಗೆ ಮಂತ್ರಾಕ್ಷತೆ-ಹೂವನ್ನು ಸಮರ್ಪಿಸಬೇಕು)

**ಪ್ರದಕ್ಷಿಣಾ ।**

ಪ್ರದಕ್ಷಿಣಾತ್ರಯಂ ಚೈವ ಕರಿಷ್ಯಾಮಿ ಪದೇ ಪದೇ ।
ಪಾಪಘ್ನಂ ತವ ದೇವೇಶಿ ದುಃಖಂ ಮೇ ಹರ ಸುವ್ರತೇ ॥
ಶ್ರೀಮಂಗಳಗೌರ್ಯೈ ನಮಃ । ಪ್ರದಕ್ಷಿಣಾಂ ಸಮರ್ಪಯಾಮಿ ॥
(ಪ್ರದಕ್ಷಿಣೆಯನ್ನು ಹಾಕಬೇಕು)

**ನಮಸ್ಕಾರಃ ।**

ಸಾಷ್ಟಾಂಗೋಽಯಂ ಪ್ರಣಾಮಸ್ತೇ ನಮಸ್ಕೃತ್ಯ ಯಥಾವಿಧಿ ।
ತ್ವದ್ದಾಸೀ ಇತಿ ಮೇ ಭಕ್ತ್ಯಾ ಪ್ರಸೀದ ಪರಮೇಶ್ವರಿ ॥
ಶ್ರೀಮಂಗಳಗೌರ್ಯೈ ನಮಃ । ನಮಸ್ಕಾರಾನ್ ಸಮರ್ಪಯಾಮಿ ॥
(ನಮಸ್ಕರಿಸಬೇಕು)

**ರಾಜೋಪಚಾರಪೂಜಾ ।**

ಶ್ರೀಮಂಗಳಗೌರ್ಯೈ ನಮಃ । ಛತ್ರಚಾಮರವ್ಯಜನದರ್ಪಣನೃತ್ಯಗೀತ-ವಾದ್ಯಾಂದೋಲಿಕಾದಿ ಸರ್ವರಾಜೋಪಚಾರಾರ್ಥೇ ಅಕ್ಷತಾನ್ ಸಮರ್ಪಯಾಮಿ ॥
(ಮಂತ್ರಾಕ್ಷತೆಯನ್ನು ಸಮರ್ಪಿಸಬೇಕು)

**ಪ್ರಾರ್ಥನಾ ।**

ಆವಾಹನಂ ನ ಜಾನಾಮಿ ನ ಜಾನಾಮಿ ವಿಸರ್ಜನಂ ।
ಪೂಜಾಂ ಚೈವ ನ ಜಾನಾಮಿ ಕ್ಷಮ್ಯತಾಂ ಪರಮೇಶ್ವರಿ ॥
ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ಕಾರುಣ್ಯಭಾವೇನ ರಕ್ಷಸ್ವ ಪರಮೇಶ್ವರಿ ॥
ಗತಂ ಪಾಪಂ ಗತಂ ದುಃಖಂ ಗತಂ ದಾರಿದ್ರ್ಯಮೇವ ಚ ।
ಆಗತಾ ಸುಖಸಂಪತ್ತಿಃ ಪುಣ್ಯಾಚ್ಚ ತವ ದರ್ಶನಾತ್ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಸುರೇಶ್ವರಿ ।
ಯತ್ಪೂಜಿತಂ ಮಯಾ ದೇವಿ ಪರಿಪೂರ್ಣಂ ತದಸ್ತು ಮೇ ॥
ಪುತ್ರಾನ್ ದೇಹಿ ಧನಂ ದೇಹಿ ಸೌಭಾಗ್ಯಂ ದೇಹಿ ಮಂಗಲೇ ।
ಅನ್ಯಾಂಶ್ಚ ಸರ್ವಕಾಮಾಂಶ್ಚ ದೇಹಿ ದೇವಿ ನಮೋಽಸ್ತು ತೇ ॥
ಶ್ರೀಮಂಗಳಗೌರ್ಯೈ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥
(ಪ್ರಾರ್ಥಿಸಬೇಕು)

**ಸಮಾಪನಮ್ ।**

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ॥
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥
ಅನೇನ ಮಂಗಲಗೌರೀ ಪೂಜನೇನ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಶ್ರೀಮಂಗಳಗೌರ್ಯಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಜಯಾಪತಿಸಂಕರ್ಷಣಃ ಪ್ರೀಯತಾಂ ॥

## ವಾಯನದಾನಮ್ ।

॥ ಶ್ರೀಶಿವ-ಮಂಗಳಗೌರೀಪ್ರೀತ್ಯರ್ಥಂ ವಾಯನದಾನಮಹಂ ಕರಿಷ್ಯೇ ॥

ಗೃಹಾಣೇದಂ ದ್ವಿಜಶ್ರೇಷ್ಠ ವಾಯನಂ ದಕ್ಷಿಣಾನ್ವಿತಮ್ ।
ಫಲತಂಡುಲಸಂಯುಕ್ತಂ ಉಮಾಶಂಕರತುಷ್ಟಯೇ ॥

ಸೌಭಾಗ್ಯಾರೋಗ್ಯಕಾಮಾನಾಂ ಸರ್ವಸಂಪತ್ಸಮೃದ್ಧಯೇ ।
ಗೌರೀಗಿರೀಶತುಷ್ಟ್ಯರ್ಥಂ ವಾಯನಂ ತೇ ದದಾಮ್ಯಹಂ ॥

*ಲಡ್ಡುಕಂಚುಕಸಂಯುಕ್ತಂ ಸವಸ್ತ್ರಫಲದಕ್ಷಿಣಂ ।
ಮಾತ್ರೇ ಸುವಾಸಿನೀಭ್ಯಶ್ಚ ದೇಯಂ ವಾಯನಮುತ್ತಮಂ ॥

ಜನನೀಂ ಮಾತೃಸಂಬಂಧಿಸ್ತ್ರಿಯಃ ಷೋಡಶ ಭೋಜಯೇತ್ ॥
ನೀರಾಜನಂ ತತಃ ಕುರ್ಯಾತ್ ದೀಪೈಃ ಷೋಡಶಸಂಖ್ಯಕೈಃ ॥

ಭೋಕ್ತವ್ಯಾಃ ದೀಪಕಾಶ್ಚಾರ್ಥಸ್ತ್ರೀಭಿಃ ಸಹ ಸ್ವಯಂ ತತಃ ।
ಅನ್ನಂ ಲವಣವರ್ಜಂ ತು ಸ್ವಯಂ ಮೌನೇನ ಭೋಜಯೇತ್ ॥

ಸುವಾಸಿನೀಶ್ಚಾಪಿ ತಥಾ ವಸ್ತ್ರಾಲಂಕಾರಭೂಷಣೈಃ ।
ಪೂಜಯೇಚ್ಚ ತತಃ ಪಶ್ಚಾತ್ಕುರ್ಯಾದ್ಗೌರೀವಿಸರ್ಜನಂ ॥

ವಿಪ್ರಾಯ ಪ್ರತಿಮಾ ದೇಯಾ ರತ್ನವಸ್ತ್ರಾಣಿ ಭೂರಿಶಃ ।
ಏವಂ ಕೃತೇ ವಿಧಾನೇಽಸ್ಮಿನ್ ನಾರ್ಯೋಽವೈಧವ್ಯಮಾಪ್ನುಯಾತ್ ॥

॥ ಇತಿ ಶ್ರೀಮಂಗಳಗೌರೀಪೂಜಾ ಸಂಪೂರ್ಣಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥



* ಕಡಲೇ ಉಂಡೆ, ಖಣ, ತೆಂಗಿನಕಾಯಿ, ಅರಿಶಿನ ಕುಂಕುಮ, ಮಂಗಲಸೂತ್ರ, ದಕ್ಷಿಣೆ ಮುಂತಾದವುಗಳಿಂದ ಕೂಡಿದ ಮೊರದ ಬಾಗಿಣವನ್ನು ತಾಯಿಗೆ ಮತ್ತು ಸುವಾಸಿನಿಯರಿಗೆ ಕೊಡಬೇಕು. ತಾಯಿಯ ಬಳಗಕ್ಕೆ ಭೋಜನ ಮಾಡಿಸಬೇಕು. ಹದಿನಾರು ಆರತಿಗಳಿಂದ ಗೌರಿಗೆ ಆರತಿಮಾಡಿ, ಅವುಗಳನ್ನು ಎಲ್ಲರಿಂದಲೂ ಕೂಡಿ ತಾನೂ ತಿನ್ನಬೇಕು. ಅಡುಗೆ ಪದಾರ್ಥಗಳಿಗೆ ಉಪಯೋಗಿಸಿದ ಉಪ್ಪನ್ನು ಬಿಟ್ಟು ಬೇರೆ ಉಪ್ಪನ್ನು ಉಪಯೋಗಿಸದೇ ಮೌನವಾಗಿ ಊಟ ಮಾಡಬೇಕು. ಆಮೇಲೆ ಗೌರಿಯನ್ನು ವಿಸರ್ಜನೆ ಮಾಡಬೇಕು. ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಡಬೇಕು. ಈ ಪ್ರಕಾರ ಭಕ್ತಿಯಿಂದ ಮಾಡಿದ್ದಲ್ಲಿ ಮುತ್ತೈದೆತನವನ್ನು ಅನುಭವಿಸುವಳು.

## ॥ ಶ್ರೀಮಂಗಳಗೌರೀವ್ರತದ ಕಥೆ ॥

ಶ್ರೀಭವಿಷ್ಯೋತ್ತರ ಪುರಾಣದಲ್ಲಿ ಶ್ರೀಕೃಷ್ಣನು ಧರ್ಮರಾಜನಿಗೆ ಈ ಕಥೆಯನ್ನು ಸ್ತ್ರೀಯರಿಗೆ ವೈಧವ್ಯ ಬಾರದ ವ್ರತವೆಂಬುದಾಗಿ ವರ್ಣಿಸಿದ್ದಾನೆ. ಅದರ ಸಾರಾಂಶ ಹೀಗಿದೆ :

ಕುಂಡಿನವೆಂಬ ನಗರದಲ್ಲಿ ಧರ್ಮಪಾಲನೆಂಬ ಧನಿಕನಾದ, ಬ್ರಾಹ್ಮಣ ಪ್ರಿಯನಾದ ವೈಶ್ಯನೊಬ್ಬ ತನ್ನ ಹೆಂಡತಿಯೊಡನೆ ಇದ್ದನು. ಆತನು ಪುತ್ರಸಂತಾನವಿಲ್ಲದೇ ದುಃಖಿಯಾಗಿದ್ದನು. ಆತನ ಮನೆಗೆ ರುದ್ರಾಕ್ಷಿಮಾಲೆ ಧರಿಸಿದ ಸುರೂಪಿಯಾದ ಭಸ್ಮಧಾರಿಯಾದ ಭಿಕ್ಷುಕ ನಿತ್ಯವೂ ಬರುತ್ತಿದ್ದರೂ, ಅವರ ಅನ್ನವನ್ನು ಮಾತ್ರ ಎಂದೂ ಸ್ವೀಕರಿಸುತ್ತಿರಲಿಲ್ಲ. ಇದರಿಂದ ನೊಂದ ಧರ್ಮಪಾಲನ ಪತ್ನಿ ಗಂಡನಿಗೆ ತನ್ನ ದುಃಖ ತೋಡಿಕೊಂಡಾಗ ಗಂಡನು "ಪ್ರಿಯೇ, ಆ ಭಿಕ್ಷುಕ ಇನ್ನೊಮ್ಮೆ ಬಂದಾಗ ಅತನಿಗೆ ಕಾಣದಂತೆ ಅಡಗಿದ್ದು ಆತನ ಜೋಳಿಗೆಯಲ್ಲಿ ಸುವರ್ಣಗಳನ್ನು ಹಾಕು" ಎಂದನು. ಆಕೆ ಹಾಗೆಯೇ ಮಾಡಿಯೂ ಬಿಟ್ಟಳು. ಇದರಿಂದ ಖತಿಗೊಂಡ ಭಿಕ್ಷುಕ "ನಿನಗೆ ಮಕ್ಕಳಾಗದಿರಲಿ" ಎಂದು ಶಪಿಸಿಬಿಟ್ಟನು. ದುಃಖಿತಳಾದ ಆಕೆ ಶಾಪಕ್ಕೆ ಪರಿಹಾರವೇನೆಂದು ಬೇಡಿಕೊಂಡಳು. ಆಗ ಭಿಕ್ಷುಕ "ನಿನ್ನ ಗಂಡನು ನೀಲಿ ವಸ್ತ್ರ ಧರಿಸಿ, ನೀಲಿ ಕುದುರೆ ಹತ್ತಿ, ಅರಣ್ಯಕ್ಕೆ ಹೋಗಲಿ ಕುದುರೆ ಎಡವಿ ಬೀಳುವವರೆಗೆ ಹೋಗಿ ಬಿದ್ದ ನೆಲವನ್ನು ಅಗೆಯಲಿ. ಅಲ್ಲಿ ರತ್ನ-ಮಾಣಿಕ್ಯಾದಿ-ಗಳಿಂದ ಕೂಡಿದ ದೇವಾಲಯದಲ್ಲಿ ಪಾರ್ವತಿ ಇರುತ್ತಾಳೆ. ಆಕೆಯನ್ನು ಪೂಜಿಸಿದರೆ ಉದ್ಧರಿಸುವಳು" ಎಂದನು. ವೈಶ್ಯಪತ್ನಿ ಭಿಕ್ಷುಕನಿಗೆ ನಮಿಸಲು ಆತನು ಅಂತರ್ಧಾನನಾದನು. ಆ ಸಾಧ್ವಿ ಗಂಡನಿಗೆ ಎಲ್ಲವನ್ನು ಹೇಳಿದಳು. ಅದರಂತೆ ಧರ್ಮಪಾಲ ನೀಲಿ ಕುದುರೆ ಏರಿ ಹೊರಟ. ಎಲ್ಲವೂ ಭಿಕ್ಷುಕ ಹೇಳಿದಂತೆ ಆಯಿತು. ದಾರಿಯಲ್ಲಿ ಭಯಾನಕ ಕಾನನದಲ್ಲಿ ಕ್ರೂರಮೃಗಗಳನ್ನು ದಾಟಿ ನಡೆದ, ಕುದುರೆ ಎಡವಿದ ಸ್ಥಳದಲ್ಲಿ ನೆಲ ಅಗೆದ. ಅಲ್ಲಿ ದೇವಾಲಯ, ಅದರಲ್ಲಿದ್ದ ಪಾರ್ವತಿಯನ್ನು ಷೋಡಶೋಪಚಾರಗಳಿಂದ ಪೂಜಿಸಿದ. ತುಷ್ಟಳಾದ ಆಕೆ ಅತುಲ ಐಶ್ವರ್ಯ ನೀಡುವುದಾಗಿ ನುಡಿದಳು. ಆದರೆ ಧರ್ಮಪಾಲ ಸಂತಾನ ಭಿಕ್ಷೆ ಬೇಡಿದ. ಅದಕ್ಕೆ ಪಾರ್ವತಿ "ಧರ್ಮಪಾಲ ನಿನಗೆ ಆನಂದದಾಯಕ ಪುತ್ರಭಾಗ್ಯವಿಲ್ಲ, ಆದರೂ ವಿಧವೆಯಾಗುವ ಕನ್ಯೆ ಬೇಕೆ? ಅಲ್ಪಾಯುಷಿಯಾದ ಅಥವಾ ದೀರ್ಘಾಯುಷಿಯಾದ ಅಂಧನಾದ ಮಗ ಬೇಕೆ?" ಎಂದು ಕೇಳಿದಳು. ಆದರೆ ಧರ್ಮಪಾಲನು ಅಲ್ಪಾಯುಷಿಯಾದ ಮಗನನ್ನೇ ಬೇಡಿದನು. ಅದಕ್ಕೆ ದೇವಿಯು "ನನ್ನ

## ।। ಋಷಿಪಂಚಮೀ ದ್ವಿತೀಯಯಾಮಪೂಜಾ ।।

ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಅರುಂಧತೀಸಹಿತಕಶ್ಯಪಾದಿ ಸಪ್ತರ್ಷ್ಯಂಗರ್ತತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವೇದವ್ಯಾಸಾಯ ನಮಃ । ದ್ವಿತೀಯಯಾಮಪೂಜಾಂ ಕರಿಷ್ಯೇ ।।

(ಮಂತ್ರಾಕ್ಷತೆ - ನೀರನ್ನು ಅರ್ಘ್ಯಪಾತ್ರೆಗೆ ಬಿಡಬೇಕು)

ಅರುಂಧತೀಸಹಿತಕಶ್ಯಪಾದಿಸಪ್ತರ್ಷಿಭ್ಯೋ ನಮಃ । ಗಂಧಂ ಸಮರ್ಪಯಾಮಿ ।।

(ಗಂಧವನ್ನು ಸಮರ್ಪಿಸಬೇಕು)

ಅರುಂಧತೀಸಹಿತಕಶ್ಯಪಾದಿಸಪ್ತರ್ಷಿಭ್ಯೋ ನಮಃ । ಪುಷ್ಪೈಃ ಪೂಜಯಾಮಿ ।।

(ಪುಷ್ಪಗಳನ್ನು ಸಮರ್ಪಿಸಬೇಕು)

ಅರುಂಧತೀಸಹಿತಕಶ್ಯಪಾದಿಸಪ್ತರ್ಷಿಭ್ಯೋ ನಮಃ । ಧೂಪದೀಪೌ ಸಮರ್ಪಯಾಮಿ ।।

(ಧೂಪ-ದೀಪಗಳನ್ನು ಸಮರ್ಪಿಸಬೇಕು)

ಅರುಂಧತೀಸಹಿತಕಶ್ಯಪಾದಿಸಪ್ತರ್ಷಿಭ್ಯೋ ನಮಃ । ನೈವೇದ್ಯಂ ಸಮರ್ಪಯಾಮಿ ।।

(ನೈವೇದ್ಯವನ್ನು ಸಮರ್ಪಿಸಬೇಕು)

ಅರುಂಧತೀಸಹಿತಕಶ್ಯಪಾದಿಸಪ್ತರ್ಷಿಭ್ಯೋ ನಮಃ । ಮಂಗಲನೀರಾಜನಂ ಸಮರ್ಪಯಾಮಿ ।।

(ಮಂಗಳಾರತಿಯನ್ನು ಮಾಡಬೇಕು)

ಅರುಂಧತೀಸಹಿತಕಶ್ಯಪಾದಿಸಪ್ತರ್ಷಿಭ್ಯೋ ನಮಃ । ಮಂತ್ರಪುಷ್ಪಾಂಜಲಿಂ ಸಮರ್ಪಯಾಮಿ ।।

(ಮಂತ್ರಪುಷ್ಪಗಳನ್ನು ಸಮರ್ಪಿಸಬೇಕು)

ಅರುಂಧತೀಸಹಿತಕಶ್ಯಪಾದಿಸಪ್ತರ್ಷಿಭ್ಯೋ ನಮಃ । ಪ್ರಾರ್ಥನಾಂ ಸಮರ್ಪಯಾಮಿ ।।

(ಪ್ರಾರ್ಥಿಸಬೇಕು)

ಅನೇನ ದ್ವಿತೀಯಯಾಮಪೂಜನೇನ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಅರುಂಧತೀಸಹಿತಕಶ್ಯಪಾದಿಸಪ್ತರ್ಷ್ಯಂಗರ್ತತಭಾರತೀರಮಣಮುಖ್ಯ-ಪ್ರಾಣಾಂತರ್ಗತ ಶ್ರೀವೇದವ್ಯಾಸಃ ಪ್ರೀಯತಾಂ ।।

(ಮಂತ್ರಾಕ್ಷತೆ - ನೀರನ್ನು ಅರ್ಘ್ಯಪಾತ್ರೆಗೆ ಬಿಡಬೇಕು)

।। ಇತಿ ಋಷಿಪಂಚಮೀಪೂಜಾಪದ್ಧತಿಃ ಸಂಪೂರ್ಣಾ ।।

।। ಶ್ರೀಕೃಷ್ಣಾರ್ಪಣಮಸ್ತು ।।



## ॥ ಋಷಿಪಂಚಮೀ ವ್ರತದ ಕಥೆ ॥

**ಯುಧಿಷ್ಠಿರ ಉವಾಚ ।**

ಶ್ರುತಾನಿ ದೇವದೇವೇಶ ವ್ರತಾನಿ ಸುಬಹೂನಿ ಚ ।
ಸಾಂಪ್ರತಂ ತದ್ವದಾಚಕ್ಷ್ವ ವ್ರತಂ ಪಾಪಪ್ರಣಾಶನಮ್ ॥

**ಶ್ರೀಕೃಷ್ಣ ಉವಾಚ ।**

ಅಥಾನ್ಯದಪಿ ರಾಜೇಂದ್ರ ಪಂಚಮೀ ಋಷಿಸಂಜ್ಞಕಾ ।
ಪ್ರವಕ್ಷ್ಯಾಮಿ ಚ ಯಾಂ ಕೃತ್ವಾ ನಾರೀ ಪಾಪಾತ್ ಪ್ರಮುಚ್ಯತೇ ॥

**ಯುಧಿಷ್ಠಿರ ಉವಾಚ ।**

ಕೀದೃಶೀ ಪಂಚಮೀ ಕೃಷ್ಣ ಕಥಂ ವೈ ಋಷಿಸಂಜ್ಞಕಾ ।
ಪಾತಕಾನ್ಮುಚ್ಯತೇ ಕಸ್ಮಾನ್ನಾರೀ ಯದುಕುಲೋದ್ಭವ ॥

ಪಾಪಾನಿ ಸುಬಹೂನ್ಯತ್ರ ವಿದ್ಯಂತೇ ಕಿಲ ಕೇಶವ ।
ಕೃತಾಂ ತು ಋಷಿಪಂಚಮ್ಯಾಂ ಕಸ್ಮಾತ್ ಪಾಪಾತ್ ಪ್ರಮುಚ್ಯತೇ ॥

**ಶ್ರೀಕೃಷ್ಣ ಉವಾಚ ।**

ಅಜ್ಞಾನಾದ್ಯದಿ ವಾ ಜ್ಞಾನಾದ್ಯಾ ಸ್ತ್ರೀ ಜಾತಾ ರಜಸ್ವಲಾ ।
ದುಷ್ಟಾ ಸ್ಪೃಶತಿ ಭಾಂಡಾನಿ ಗೃಹಕರ್ಮಣಿ ಸಂಸ್ಥಿತಾ ॥

ಧರ್ಮರಾಜನು ಶ್ರೀಕೃಷ್ಣನಿಗೆ ಪ್ರಶ್ನೆ ಮಾಡುತ್ತಾನೆ. ದೇವ ದೇವೇಶನಾದ ಶ್ರೀಕೃಷ್ಣನೇ ನಿನ್ನ ಮುಖದಿಂದ ಎಷ್ಟೋ ವ್ರತಗಳು ನನ್ನಿಂದ ಕೇಳಲ್ಪಟ್ಟಿತು. ಇನ್ನು ಎಲ್ಲಾ ಪಾಪ ಪರಿಹಾರವಾಗುವ ಬೇರೊಂದು ವ್ರತವಿದ್ದರೆ ನನಗೆ ಹೇಳೆಂದು ಕೇಳಿದನು. ಅದಕ್ಕೆ ಕೃಷ್ಣನು ಹೇಳುವನು - "ಧರ್ಮರಾಜನೆ ಕೇಳು, ಸ್ತ್ರೀಯರು ಯಾವ ವ್ರತ ಮಾಡುವುದರಿಂದ ಸರ್ವಪಾಪಗಳಿಂದ ಮುಕ್ತರಾಗುವರೋ ಅಂಥ ವಿಷಯದಲ್ಲಿ **'ಋಷಿಪಂಚಮೀ'** ಎಂಬ ಒಂದು ವ್ರತವಿದೆ" ಎಂದನು. ಧರ್ಮರಾಜನು - "ಪಂಚಮೀ ಎಂದರೆ ಯಾವುದು ಅದಕ್ಕೆ 'ಋಷಿಪಂಚಮೀ' ಎಂಬುದಾಗಿ ಏಕೆ ಹೇಳುವರು?" ಎಂದನು. ಶ್ರೀಕೃಷ್ಣನು - "ಮುಟ್ಟಾದ ಸ್ತ್ರೀಯರು ತನಗೆ ತಿಳಿದೇ ಆಗಲಿ, ತಿಳಿಯದೇ ಆಗಲಿ ತನ್ನ ಮನೆಯ ಕೆಲಸವನ್ನು

ಮುಟ್ಟಿ ಮಾಡುವುದು ಇವುಗಳಿಂದ ಮಹಾ ಪಾಪಗಳುಂಟಾಗುತ್ತವೆ. ಮುಟ್ಟಾದವಳು ಮನೆ ಪಾತ್ರೆ ಪರಿಕರ ಮುಟ್ಟಿ ಮನೆಕೆಲಸ ಮಾಡುವುದರಿಂದ ಅವಳಿಗೆ ನರಕವೇ ಗತಿಯು. ಅದ್ದರಿಂದ ಮುಟ್ಟಾದ ಹೆಂಗಸನ್ನು ಮೂರು ದಿನಗಳಲ್ಲಿಯೂ ಯಾವ ಕೆಲಸದಲ್ಲೂ ಉಪಯೋಗಿಸದೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ಈ ನಾಲ್ಕು ವರ್ಣದ ಜನರಿಂದ ದೂರದಲ್ಲಿಯೇ ಇಡತಕ್ಕದ್ದಾಗಿದೆ. ಈ ದೋಷಪರಿಹಾರಕ್ಕಾಗಿ ಋಷಿಪಂಚಮೀ ಮಾಡಿದಲ್ಲಿ ರಜಸ್ವಲಾದೋಷ ಪರಿಹಾರವಾಗುವುದು.

ಹಿಂದೆ ನಡೆದುಬಂದ ಇತಿಹಾಸವನ್ನು ಹೇಳುವೆನು! ಹಿಂದೆ ಇಂದ್ರನು ಒಬ್ಬ ಬ್ರಾಹ್ಮಣನ ಮಗನಾದ ವೃತ್ರಾಸುರ ನೆಂಬುವವನನ್ನು ಯುದ್ಧದಲ್ಲಿ ಕೊಂದಿದ್ದರಿಂದ ಅವನಿಗೆ ಬ್ರಹ್ಮಹತ್ಯಾ ದೋಷ ಬಂದಿತು. ಇಂದ್ರನು ವೃತ್ರಹತ್ಯದಿಂದ ಪೀಡಿತನಾಗಿಯೂ ತೇಜೋಹೀನನಾಗಿಯೂ ಬ್ರಹ್ಮಹತ್ಯೆಯಂತಹ ಪಾಪದ ಬಿಡುಗಡೆಯಾಗುವುದಕ್ಕಾಗಿ ಅತಿನಾಚಿಕೆಯಿಂದ ಬ್ರಹ್ಮನ ಹತ್ತಿರ ಇದ್ದನು. ಇಂದ್ರನು ಶರಣುಹೋದನು. ಬ್ರಹ್ಮನು ಇಂದ್ರನ ಹೀನಸ್ಥಿತಿಯನ್ನು ನೋಡಿ ಎಲ್ಲಾ ದೇವತೆಗಳಿಂದ ಕೂಡಿ ಕ್ಷಣಕಾಲ ವಿಚಾರಮಾಡಿ ನಂತರ ಸಂತೋಷವಾದ ಮನಸ್ಸಿನಿಂದ ಇಂದ್ರನ ದೋಷವನ್ನು ಈ ರೀತಿಯಲ್ಲಿ ವಿಭಾಗಿಸಿ ಆ ಬ್ರಾಹ್ಮಹತ್ಯವನ್ನು ನಾಲ್ಕು ಕಡೆ ಹಾಕಿದನು. ಮೊದಲನೇ ಭಾಗವನ್ನು ಬೆಂಕಿಯ ಜ್ವಾಲೆಯಲ್ಲಿ, ಎರಡನೇ ಭಾಗವನ್ನು ನದಿಯ ನೀರಿನಲ್ಲಿ, ಮೂರನೇ ಭಾಗವನ್ನು ಪರ್ವತದ ಶಿಖರದಲ್ಲಿ ಹಾಗೂ ಮರಗಿಡದಲ್ಲೂ, ನಾಲ್ಕನೇ ಭಾಗವನ್ನು ಹೆಂಗಸರ ರಜಸ್ಸಿನಲ್ಲಿ ಹಾಕಿದನು. ಈ ಕಾರಣದಿಂದ ಮುಟ್ಟಾದ ಸ್ತ್ರೀಯನ್ನು ಯಾವ ಕಾರಣದಿಂದಲೂ ಪ್ರಯತ್ನ ಪೂರ್ವಕವಾಗಿಯೂ ಬ್ರಹ್ಮನ ಆದೇಶದ ಮೇರೆಗೆ ನಾಲ್ಕು ವರ್ಣದವರೂ ದೂರದಲ್ಲಿಯೇ ಇಡತಕ್ಕದ್ದು. ಮುಟ್ಟಾದ ಹೆಂಗಸು ಮೊದಲದಿನ ಚಂಡಾಲರಂತೆ ಶುದ್ಧಳಲ್ಲ. ಎರಡನೇ ದಿನ ಬ್ರಹ್ಮಘಾತಿನಿಯಂತೆ ಅಶುದ್ಧಳು. ಮೂರನೇದಿನ ಅಗಸರಂತೆ ಅಪವಿತ್ರಳು. ನಾಲ್ಕನೆಯ ದಿನ ಅವಳು ಶುದ್ಧಳಾಗುವಳು. ಗಂಡನ ಸೇವೆಯಲ್ಲಿಯೇ ಶುದ್ಧಳು ಹೊರತು, ಪಿತೃ, ದೇವತಾ ಕಾರ್ಯಗಳಲ್ಲಿ ಶುದ್ಧಳಲ್ಲ. ಅಂಥ ಕಾರ್ಯಕ್ಕೆ ಐದನೇ ದಿನವೇ ಶುದ್ಧಿಯನ್ನು ಹೊಂದುವಳು. ಮುಟ್ಟಾದ ಪಾಪನಿವಾರಣೆಗಾಗಿ ಈ ಋಷಿಪಂಚಮಿಯನ್ನು ಮಾಡಬೇಕು. ಇದರಿಂದ ಎಲ್ಲಾ ಪಾಪಗಳೂ ಉಪದ್ರವಗಳೂ ನಿವಾರಣೆಯಾಗುವುದು. ಇದನ್ನು ನಾಲ್ಕು ವರ್ಣದ ಜನರೂ ಪಾಲಿಸಬೇಕು" ಎಂದು ತಿಳಿಸಿದನು. ಇದಕ್ಕಾಗಿ ಒಂದು ಇತಿಹಾಸವನ್ನು ಶ್ರೀಕೃಷ್ಣನು ಧರ್ಮರಾಯನಿಗೆ ಹೇಳುವನು.

"ವಿದರ್ಭದೇಶದಲ್ಲಿ ಶ್ಯೇನಜಿತ್ ಎಂಬ ರಾಜನಿದ್ದನು. ಅವನ ದೇಶದಲ್ಲಿ ಸುಮಿತ್ರನೆಂಬ ಒಬ್ಬ ಬ್ರಾಹ್ಮಣನು ಇದ್ದನು. ಅವನಿಗೆ ಜಯಶ್ರೀ ಎಂಬ ಹೆಂಡತಿಯೂ ಇದ್ದಳು. ಇವರ ಮನೆಯಲ್ಲಿ ಕೆಲಸದವರೂ, ಸ್ನೇಹಿತರೂ ಆಪ್ತಜನರು ಹೀಗೆ ಬಹಳ ಜನ ಇರುತ್ತಿದ್ದರು. ಆ ಜನರೆಲ್ಲರ ಹೊಟ್ಟೆ ಹೇಗೆ ತುಂಬುವದೆಂಬ ಚಿಂತೆಯಿಂದ ಮಳೆಗಾಲದಲ್ಲಿ ಮನೆ ಕೆಲಸ ಮುಗಿಸಿ, ನಂತರ ಹೊಲದಲ್ಲಿ ಹೋಗಿ ಕೆಲಸ ಮಾಡುತ್ತಿದ್ದರು. ಹೊಲದ

ಕೆಲಸವನ್ನು ಜಯಶ್ರೀಯೂ ಮಾಡುತ್ತಿದ್ದಳು. ಹೀಗಿರಲು ಒಂದು ದಿನ ಅವಳು ಮುಟ್ಟಾದಳು. ಆದರೂ ಮನೆಯ ಪಾತ್ರೆಪರಿಕರಗಳನ್ನು ಮುಟ್ಟಿ ಮನೆಯ ಕೆಲಸವನ್ನು ಮಾಡಿದಳು. ಮುಂದೆ ಕೆಲವು ಕಾಲದ ನಂತರ ಅವಳು ಸತ್ತುಹೋದಳು. ಅದಾದ ಕೆಲವು ದಿವಸಗಳಲ್ಲಿಯೇ ಅವಳ ಗಂಡನಾದ ಸುಮಿತ್ರನೂ ಸತ್ತುಹೋದನು. ಹೀಗೆ ಅವರಿಬ್ಬರೂ ಕರ್ಮವಶರಾದ ಮೇಲೆ ಅವರ ಮಗನಾದ ಸುಮತಿಯ ಮನೆಯಲ್ಲೇ ತಾಯಿಯಾದ ಜಯಶ್ರೀಯು ನಾಯಿಯ ಜನ್ಮವನ್ನೂ, ತಂದೆಯಾದ ಸುಮಂತ್ರನು ಎತ್ತಿನ ಜನ್ಮವನ್ನು ಹೊಂದಿದ್ದರು. ಆದರೆ ಅವರಿಗೆ ಹಿಂದಿನ ಜನ್ಮದ ಸ್ಮರಣೆ ಇದ್ದಿತು. ಸುಮತಿಯಾದರೋ ಗುರುಸೇವಾ ತತ್ಪರನಾಗಿ, ಧರ್ಮಮಾರ್ಗದಿಂದ ದೇವರು ಅತಿಥಿ ಪೂಜಾದಲ್ಲಿಯೇ ನಿರತನಾಗಿದ್ದನು. ಸುಮತಿಯ ಹೆಂಡತಿಯ ಹೆಸರು ಚಂದ್ರಮತಿ ಎಂಬುದಾಗಿತ್ತು. ಸಹಧರ್ಮಿಣಿಯಾಗಿದ್ದಳು.

ಹೀಗಿರುವಾಗ ಸುಮತಿಯು ಚಂದ್ರಮತಿಗೆ ಹೀಗೆ ಹೇಳಿದನು, ಈ ದಿನ ನಮ್ಮ ತಂದೆಯ ಶ್ರಾದ್ಧವಿದೆ. ಬ್ರಾಹ್ಮಣರ ಭೋಜನವಾಗಬೇಕಾಗಿದೆ. ಅದಕ್ಕಾಗಿ ನೀನು ಅಡಿಗೆಯನ್ನು ಮಾಡೆಂದು ಹೇಳಿದನು. ಗಂಡನ ಮಾತಿನಂತೆ ಚಂದ್ರಮತಿಯು ಅಡಿಗೆ ಸಿದ್ಧಪಡಿಸಿದಳು. ಪಾಯಸದ ಪಾತ್ರೆಯನ್ನು ಒಲೆಯ ಮೇಲೆಯೇ ಇಟ್ಟಿದ್ದಳು. ಅದರಲ್ಲಿ ಒಂದು ಹಾವು ತನ್ನ ವಿಷವನ್ನು ಚೆಲ್ಲಿತು. ಇದನ್ನು ನಾಯಿಯೂ ನೋಡಿತು. ಈ ಪಾಯಸವನ್ನು ತಿಂದ ಬ್ರಾಹ್ಮಣರು ವಿಷವೇರಿ ಸಾಯುವರೆಂದೂ ಅದರಿಂದ ನನ್ನ ಮಗನಿಗೆ ಬ್ರಹ್ಮಹತ್ಯೆದೋಷ ಬರುವುದೆಂದು ಯೋಚಿಸಿ, ಭಯಗೊಂಡು ತಾನು ಹೋಗಿ ಆ ಅಡಿಗೆ ಪಾತ್ರೆಗಳನ್ನು ಮುಟ್ಟಿತು. ಇದನ್ನು ನೋಡಿದ ಚಂದ್ರಮತಿಯು ಸಿಟ್ಟಿನಿಂದ ಆ ನಾಯಿಯನ್ನು ಉರಿಯುವ ಕಟ್ಟಿಗೆಯಿಂದ ಹೊಡೆದು, ಆ ಅಪವಿತ್ರವಾದ ಅಡಿಗೆಯನ್ನು ಹೊರಗೆ ಹಾಕಿ ಶುದ್ಧಮಾಡಿ ಬೇರೆ ಅಡಿಗೆಯನ್ನು ಮಾಡಿದಳು. ಸುಮತಿಯು ವಿಧಿಪೂರ್ವಕ ಶ್ರಾದ್ಧಕರ್ಮವನ್ನು ಮಾಡಿ ಮುಗಿಸಿದನು. ಬ್ರಾಹ್ಮಣರ ಭೋಜನವು ಆಯಿತು. ಬ್ರಾಹ್ಮಣರ ಎಂಜಲನ್ನು ಸಹ ಚಂದ್ರಮತಿಯು ಹೊರಗೆ ಹಾಕದೆ ಒಂದು ನೆಲದಲ್ಲಿ ಹಳ್ಳ ಮಾಡಿ ಅದರಲ್ಲಿ ಮುಚ್ಚಿಟ್ಟಳು. ಆ ದಿನ ನಾಯಿಗೆ ಉಪವಾಸವೇ ಆಯಿತು. ಅಂದಿನ ರಾತ್ರಿ ನಾಯಿಯು ಎತ್ತಿನ ಹತ್ತಿರ ಹೋಗಿ ಹೀಗೆ ಹೇಳಿತು. ಈ ದಿನ ನನಗೆ ಬಹಳ ಹಸಿವೆ ಆಗಿದೆ. ಪ್ರತಿದಿನವೂ ನನ್ನ ಮಗನು ನನಗೆ ಏನಾದರೂ ತಿನ್ನಲು ಕೊಡುತ್ತಿದ್ದನು. ಆದರೆ ಈದಿನ ಕೊಡಲಿಲ್ಲ. ಕಾರಣ ತಿಳಿಯದಾಗಿದೆ. ಈ ದಿನ ನನ್ನ ಸೊಸೆಯು ಅಡಿಗೆ ಮಾಡುತ್ತಿದ್ದಾಗ ಪಾಯಸದ ಪಾತ್ರೆಯಲ್ಲಿ ಹಾವು ವಿಷ ಚೆಲ್ಲಿತು. ಅದನ್ನು ನೋಡಿದ ನಾನು ಆ ಪಾಯಸದ ಪಾತ್ರೆಯನ್ನು ಹೋಗಿ ಮುಟ್ಟಿದೆ. ಅದರಿಂದ ಕೋಪಗೊಂಡ ಸೊಸೆಯು ಉರಿಯುವ ಕಟ್ಟಿಗೆಯಿಂದ ನನಗೆ ಹೊಡೆದಳು. ನಡುವು ಮುರಿಯಿತು ಎಂಬುದಾಗಿ ನಾಯಿ ಹೇಳಲು ಎತ್ತು ಸಹ ತನ್ನ ಮನಸ್ಸಿನಲ್ಲಿ ಖೇದ ಹೊಂದಿ ನಾನೇನು ಮಾಡಲಿ. ಈ ದಿನ ನಿನ್ನ ಮಗನ ಹೊಲದಲ್ಲಿ ಸಾಯಂಕಾಲದವರೆಗೂ ನೇಗಿಲನ್ನು ಜಗ್ಗಿದೆನು. ನನ್ನ ಮಗನು ಮೋರೆಗೆ ಜಾಳಿಗೆ ಹಾಕಿ ಮುಖವನ್ನು ಕಟ್ಟಿ ಬಹಳ ಹೊಡೆದನು. ನನಗೂ ಆಹಾರವಿಲ್ಲ, ಹಸಿವೆಯಾಗಿದೆ. ನನ್ನ ಮಗನು ಇಷ್ಟು ಭಕ್ತಿಯಿಂದ

ಶ್ರಾದ್ಧ ಮಾಡಿದರೂ ನನಗೆ ಸೌಖ್ಯವಾಗದ ಕಾರಣ ಈ ಶ್ರಾದ್ಧವು ವ್ಯರ್ಥವೇ ಸರಿ ಎಂಬುದಾಗಿ ಎತ್ತು ನಾಯಿಗೆ ಹೇಳಿತು. ಕೃಷ್ಣನು ಹೇಳುತ್ತಾನೆ! ಧರ್ಮರಾಜನೇ ಈ ರೀತಿ ನಾಯಿ, ಎತ್ತುಗಳ ಸಂವಾದವನ್ನು ಸುಮತಿಯು ಕೇಳಿ, ಇವರು ತನ್ನ ತಾಯಿ-ತಂದೆಗಳೇ ಆಗಿರಬೇಕೆಂದು ತಿಳಿದು, ಬಹುದುಃಖದಿಂದ ಆ ರಾತ್ರಿಯಲ್ಲೆ ಅವಕ್ಕೆ ಹೊಟ್ಟೆ ತುಂಬ ಅನ್ನವನ್ನು ಹಾಕಿದನು. ನಂತರ ಹೀಗೆ ಯೋಚಿಸಿದನು, ಅಂಥ ನೀಚ ಅವಸ್ಥೆ ಅವರಿಗೆ ಹೇಗೆ ಬಂದಿತು? ಅದರ ಬಿಡುಗಡೆಗೆ ಕಾಡಿಗೆ ಹೋಗಿ ಜ್ಞಾನವೃದ್ಧರಾದ ಋಷಿಗಳನ್ನು ನೋಡಿ ವಿಚಾರಿಸಿಕೊಂಡು ಬರುವುದೆಂದು ಯೋಚಿಸಿ ಮರುದಿನ ಕಾಡಿಗೆ ಹೋಗಿ ಅಲ್ಲಿರತಕ್ಕ ಪರಮಧಾರ್ಮಿಕರಾದ ಋಷಿಗಳನ್ನು ನೋಡಿ, ಅವರಿಗೆ ನಮಸ್ಕಾರ ಮಾಡಿ, ಹೀಗೆ ಪ್ರಾರ್ಥಿಸುವನು. ಎಲಾ ಋಷಿಗಳಿರಾ! ನನ್ನದೊಂದು ವಿಚಾರವಿದೆ. ನನ್ನ ತಾಯಿ-ತಂದೆಗಳು ಸ್ವತಃ ತಾವು ಸದಾಚಾರಿಗಳಾಗಿದ್ದರೂ ನನ್ನ ತಂದೆಯು ಎತ್ತಾಗಿಯೂ, ನನ್ನ ತಾಯಿಯು ನಾಯಿಯಾಗಿ ನೀಚಯೋನಿಯಲ್ಲಿ ಹೇಗೆ ಉತ್ಪನ್ನರಾದರು? ನನ್ನ ತಾಯಿ-ತಂದೆ ಅಂಥ ಪಾಪದಿಂದ ಬಿಡುಗಡೆಯನ್ನು ಹೇಗೆ ಹೊಂದಬಹುದು ಎನ್ನುವುದನ್ನು ಯೋಚಿಸಿ ಹೇಳಿರೆಂದು ಬೇಡಿದನು.

ಕೃಷ್ಣನು ಧರ್ಮರಾಜನಿಗೆ ಹೇಳುವನು. ಶ್ರೇಷ್ಠನಾದ ಸರ್ವತಪ ಎಂಬುವನು ಹೀಗೆ ಹೇಳಿದನು. ನಿನ್ನ ತಾಯಿಯು ಹಿಂದಿನ ಜನ್ಮದಲ್ಲಿ ಮುಟ್ಟಾದದ್ದು ತಿಳಿದೂ ಮೂರ್ಖತನದಿಂದ ಮನೆ ಕೆಲಸಮಾಡಿ ಪಾತ್ರೆ-ಪಗಡಿಯನ್ನು ಮುಟ್ಟಿರುವದರಿಂದ ಅವಳು ನಾಯಿಯಾದಳು. ನಿನ್ನ ತಂದೆಯು ನಿನ್ನ ತಾಯಿಯ ಸಂಪರ್ಕ ದೋಷದಿಂದ ಎತ್ತಿನ ಜನ್ಮವನ್ನು ಪಡೆದನು. ನಿನ್ನ ತಂದೆಯು ಸ್ವತಃ ನಿರ್ದೋಷಿಯು. ನಿನ್ನ ತಾಯಿಯ ಸಂಪರ್ಕದೋಷದಿಂದ ಎತ್ತಿನ ಜನ್ಮ ಬಂತು. ಇದರ ನಿವಾರಣೆಗಾಗಿ ನೀನು ಋಷಿ ಪಂಚಮೀ ಎಂಬ ವ್ರತವನ್ನು ನಿನ್ನ ಹೆಂಡತಿಯಿಂದ ಕೂಡಿ ಮಾಡು, ಸಪ್ತರ್ಷಿಗಳನ್ನು ಪೂಜಿಸು. ಏಳುವರ್ಷ ಕಾಲ ಈ ವ್ರತವನ್ನು ಮಾಡಬೇಕು. ಉದ್ಯಾಪನೆಯನ್ನೂ ಸಹ ಯೋಗ್ಯತೆಗೆ ತಕ್ಕಂತೆ ಮಾಡಬೇಕು. ಅನುಕೂಲತೆಯನ್ನು ನೋಡಿ ಪ್ರಾರಂಭದಲ್ಲಾಗಲೀ - ಮಧ್ಯದಲ್ಲಾಗಲೀ ಕೊನೆಯಲ್ಲಾಗಲೀ ಉದ್ಯಾಪನೆ ಮಾಡಬೇಕು. ವ್ರತದ ದಿವಸ ನೇಗಿಲನ್ನು ಹೊಡಿಸಿಕೊಳ್ಳದಿರುವ ಭೂಮಿಯಲ್ಲಿ ಬೆಳೆದ ನವಣೆ ಮುಂತಾದ ಧಾನ್ಯದಿಂದ ಶಾಕಾಹಾರದಿಂದ ಉಪಹಾರ ಮಾಡಬೇಕು. ಗೆಡ್ಡೆ ಗೆಣಸನ್ನು ಸೇವಿಸಬೇಕು. ಭಾದ್ರಪದ ಶುದ್ಧ ಪಂಚಮೀ ತಿಥಿ ಬರಲು ಆ ದಿನ ಮಧ್ಯಾಹ್ನ ನದಿ ಮುಂತಾದ ಜಲಾಶಯದ ನಿರ್ಮಲವಾದ ನೀರಿನಲ್ಲಿ ಉತ್ತರಾಣಿಕಡ್ಡಿಗಳಿಂದ ಹಲ್ಲುಗಳನ್ನು ಸ್ವಚ್ಛಮಾಡಿ, ಮೊದಲು ವನಸ್ಪತಿಗೆ ಪ್ರಾರ್ಥನೆಮಾಡಿ ನಂತರ ಮೃತ್ತಿಕಾಸ್ನಾನ ಮುಂತಾದ ಏಳು ಸ್ನಾನಗಳನ್ನು ಮಾಡಿ ನೆಲ್ಲಿಕಾಯಿಯ ಕಲ್ಕದಿಂದ (ನೆಲ್ಲೀಚಿಟ್ಟು) ಕೂದಲನ್ನು ಚೆನ್ನಾಗಿ ತೊಳೆದುಕೊಂಡು ಶುಭ್ರವಾದ ಮಡಿವಸ್ತ್ರವನ್ನು ಧರಿಸಿ ಏಕಚಿತ್ತದಿಂದ ಅರುಂಧತೀ ಸಹಿತರಾದ ಕಶ್ಯಪಾದಿ ಸಪ್ತರ್ಷಿಗಳ ಅಂತರ್ಗತನಾದ ಭಾರತೀರಮಣಮುಖ್ಯಪ್ರಾಣಾಂತರ್ಗತನಾದ ಶ್ರೀವೇದವ್ಯಾಸ-

ರೂಪಿಯಾದ ಪರಮಾತ್ಮನನ್ನು ಪೂಜಿಸಿದರೆ ಋತುಸಂಪರ್ಕದೋಷದಿಂದ ಮುಕ್ತರಾಗುವರು. ಈ ವಿಷಯದಲ್ಲಿ ಸಂಶಯವಿಲ್ಲ.

ಕೃಷ್ಣನು ಹೇಳುವನು, ಎಲೈ ಧರ್ಮರಾಜನೇ ಕೇಳು. ಈ ಮಾತನ್ನು ಕೇಳಿದ ಸುಮತಿಯು ಈ ವ್ರತವನ್ನು ಹಿಂದೆ ಯಾರು ಮಾಡಿದ್ದರು? ಇದು ಹೇಗೆ ಭೂಮಿಯಲ್ಲಿ ಪ್ರಸಿದ್ಧಿ ಹೊಂದಿತು. ಸರ್ವತಪನು ಹೀಗೆ ಹೇಳಿದನು. ಋಷಿಪಂಚಮಿ ಎಂಬ ವ್ರತವಿದೆ. ಇದನ್ನು ಮಾಡುವುದರಿಂದ ನರಕದರ್ಶನವಿಲ್ಲ. ಇದರ ಇತಿಹಾಸವನ್ನು ಹೇಳುವೆನು ಕೇಳು. ವಿದರ್ಭದೇಶದಲ್ಲಿ ಉತ್ತಂಕನೆಂಬ ಒಬ್ಬ ಬ್ರಾಹ್ಮಣನು ಇದ್ದನು. ಅವನಿಗೆ ಮಹಾಪತಿವ್ರತೆ-ಯಾದ ಸುಶೀಲಾ ಎಂಬ ಹೆಂಡತಿಯೂ, ಸುವಿಭೂಷಣ ಎಂಬ ಮಗನೂ, ಒಬ್ಬ ಮಗಳೂ ಇದ್ದರು. ಮಗನನ್ನು ವೇದ ಶಾಸ್ತ್ರದಲ್ಲಿ ನಿರತನನ್ನಾಗಿ ಮಾಡಿ, ಅವನಿಗೆ ಮದುವೆ ಮಾಡಿ ತನ್ನ ಮಗ ಸೊಸೆಯನ್ನು ಮನೆಯಲ್ಲಿಟ್ಟು ತಾನು ಹೆಂಡತಿ ಮಗಳಿನೊಂದಿಗೆ ಕಾಡಿಗೆ ಹೋಗಿ ಅಲ್ಲಿ ಶಿಷ್ಯರಿಗೆ ವೇದಾಭ್ಯಾಸ ಮಾಡಿಸುತ್ತಾ ಇದ್ದನು. ಉತ್ತಂಕನು ತನ್ನ ಒಬ್ಬ ಮಗಳನ್ನು ಕುಲೀನ ಬ್ರಾಹ್ಮಣನಿಗೆ ಕೊಟ್ಟು ಲಗ್ನ ಮಾಡಿದನು. ಆದರೆ ಲಗ್ನವಾದ ಸ್ವಲ್ಪ ದಿವಸದಲ್ಲಿಯೇ ಆಕೆಯ ಗಂಡನು ಸತ್ತು ಹೋದನು. ಇದರಿಂದ ಅವಳಿಗೆ ವೈಧವ್ಯ ಬಂದಿತು. ಈಕೆಯು ತನ್ನ ಪತಿವ್ರತಾಧರ್ಮವನ್ನು ಪಾಲಿಸುವ ಉದ್ದೇಶದಿಂದ ತನ್ನ ತಂದೆಯ ಮನೆಯಲ್ಲಿ ಇದ್ದು ತಂದೆ ತಾಯಿಯ ಸೇವಾ ಮಾಡುತ್ತಾ ಇದ್ದಳು.

ಹೀಗಿರಲು ಒಂದು ದಿನ ಮಗಳು ತಂದೆಯ ಸೇವೆಯಲ್ಲಿ ಕಾಲ ಕಳೆಯುತ್ತಿರಲು ದಣಿವು ಹೆಚ್ಚಾಗಿ ರಾತ್ರಿ ಮಲಗಿರುವಾಗ ಅವಳ ದೇಹವು ಕಾಣದೆ ಹುಳಗಳ ರಾಶಿ ಮಾತ್ರ ಕಾಣಿಸುತ್ತಿತ್ತು. ಹೀಗಿರುವ ಗುರುಪುತ್ರಿಯನ್ನು ನೋಡಿದ ಶಿಷ್ಯರೂ ಕೂಡಲೆ ಅವರ ತಾಯಿಯ ಹತ್ತಿರ ಹೋಗಿ ಹೀಗೆ ಹೇಳಿದರು. ತಾಯಿ! ನಿನ್ನ ಮಗಳು ರಾತ್ರಿ ಮಲಗಿದ್ದವಳು ನಮಗೆ ಕಾಣದೆ ಹುಳುಗಳ ರಾಶಿ ಮಾತ್ರ ಕಾಣಿಸುತ್ತಿದೆ. ನೀವೇ ಬಂದು ನೋಡಿರೆಂದು ಹೇಳುವರು. ವಜ್ರಪಾತಕ್ಕೆ ಸಮವಾದ ಶಿಷ್ಯರ ಈ ಮಾತನ್ನು ಕೇಳಿ ಉತ್ತಂಕನ ಹೆಂಡತಿಯು ಭ್ರಾಂತಳಾಗಿ ಕೂಡಲೆ ತನ್ನ ಮಗಳ ಹತ್ತಿರ ಬಂದವಳಾಗಿ ಸಂತಪ್ತವಾದ ಮನಸ್ಸಿನಿಂದ ದುಃಖಿತಳಾಗಿ ಅಲ್ಲಿಯೇ ಮೂರ್ಛೆ ಹೋದಳು. ನಂತರ ಮೂರ್ಛೆಯಿಂದ ಎದ್ದು ಕುಳಿತಿರತಕ್ಕ ತನ್ನ ಮಗಳನ್ನು ಚೆನ್ನಾಗಿ ಕುಳ್ಳರಿಸಿ ಕಣ್ಣಿಗೆ ನೀರನ್ನು ಹಾಕಿ, ತನ್ನ ಎರಡು ಕೈಗಳಿಂದ ಮಗಳನ್ನು ಹಿಡಿದು ಆಕೆಯ ತಂದೆಯ ಹತ್ತಿರ ಕರೆತಂದು ಹೀಗೆ ಕೇಳಿದಳು. ಎಲೈ ಸ್ವಾಮಿಯೇ! ಮಹಾಪತಿವ್ರತೆಯಾದ ನಿಮ್ಮ ಮಗಳು ಯಾವ ಕರ್ಮದಿಂದ ಮಧ್ಯರಾತ್ರಿಯಲ್ಲಿ ಮಲಗಿದ್ದ ಸಮಯದಲ್ಲಿ ದೇಹವೆಲ್ಲಾ ಹುಳುಗಳರಾಶಿಯಾಯಿತು. ಇದರ ಕಾರಣವೇನೆಂದು ಕೇಳುವಳು. ಕ್ಷಣಹೊತ್ತು ವಿಚಾರಮಾಡಿ ಉತ್ತಂಕನು ಹೇಳುವನು, ಪ್ರಿಯೇ ಕೇಳು! ನಿನ್ನ ಮಗಳು ಹಿಂದಿನ ತನ್ನ ಏಳನೆಯ ಜನ್ಮದಲ್ಲಿ ಒಬ್ಬ ಬ್ರಾಹ್ಮಣನ ಹೆಂಡತಿಯಾಗಿದ್ದು ತಾನು ರಜಸ್ವಲೆಯಾಗಿದ್ದಾಗ ಮನೆಯ ಕೆಲಸವನ್ನು ಮುಟ್ಟಿ ಮುಟ್ಟಿ ಮಾಡಿದ ಕಾರಣದಿಂದ ಈ ಕಾಲಕ್ಕೆ ಇವಳ ದೇಹವು ಹುಳುರಾಶಿಯಾಗಿತ್ತು. ಮುಟ್ಟಾದವಳು ಯಾವಾಗಲೂ

ಮನೆಯ ಕೆಲಸವನ್ನು ಮಾಡಬಾರದು. ಮುಟ್ಟಾದವಳು ಮೊದಲನೆಯ ದಿನ ಚಂಡಾಲರಂತೆ ಇರುವವಳು. ಎರಡನೆಯ ದಿನ ಬ್ರಾಹ್ಮಣರನ್ನು ಕೊಂದವಳಂತೆ ಇರುವಳು. ಮೂರನೆಯ ದಿನ ಅಗಸರೆಂದು ಅನಿಸಿಕೊಳ್ಳುವಳು. ನಾಲ್ಕನೆಯ ದಿನ ಶುದ್ಧಳು. ಆ ನಿನ್ನ ಮಗಳು ಅದೇ ಜನ್ಮದಲ್ಲಿ ತನ್ನ ಗೆಳತಿಯರಿಂದ ಕೂಡಿ ಋಷಿಪಂಚಮೀವ್ರತಕ್ಕೆ ಅವಮಾನ ಮಾಡಿದ್ದಳು. ಆದರೂ ವ್ರತವನ್ನು ನೋಡಿದ ಪುಣ್ಯದಿಂದ ಈಗ ಬ್ರಾಹ್ಮಣರ ಕುಲದಲ್ಲಿ ಹುಟ್ಟಿದಳು. ಅವಮಾನ ಮಾಡಿದ್ದರಿಂದ ಈಕೆಯ ದೇಹ ರಾತ್ರಿ ಕ್ರಿಮಿರಾಶಿಯಾಯಿತು ಎಂದನು. ಇವಳು ಅಂಥ ಪಾಪವೇನು ಮಾಡಿರುವಳೆಂದು, ಅದರ ಪರಿಹಾರವನ್ನು ತಿಳಿಸಬೇಕೆಂದು ಸುಶೀಲೆಯು ಕೇಳಿದಳು.

ಆ ಮಹಾಶ್ಚರ್ಯಕಾರಕವಾದ ವ್ರತವನ್ನು ಹೇಳಿರೆಂದೂ ಪ್ರಾರ್ಥಿಸಿದಳು. ಉತ್ತಂಕನು ಹೇಳುವನು. ಋತುಸಂಪರ್ಕದೋಷದಿಂದ ಬಿಡುಗಡೆಯಾಗುವ ವ್ರತವಿದೆ. ಅದನ್ನು ಮಾಡುವುದರಿಂದ ಸ್ತ್ರೀಯರು ಎಲ್ಲ ದುಃಖದಿಂದ ಪಾರಾಗುವರು. ಎಲ್ಲ ರೀತಿಯಿಂದಲೂ ಮಂಗಳವೇ ಆಗುವುದು. ಐಶ್ವರ್ಯವು ಹೆಚ್ಚುವುದು. ಆಪತ್ತುಗಳು ನಾಶವಾಗುವುದು. ಭಾದ್ರಪದ ಶುದ್ಧಪಂಚಮೀ ದಿನ, ನದೀ ಮುಂತಾದ ಜಲಾಶಯದಲ್ಲಿ ಸ್ನಾನಮಾಡಿ ವ್ರತಕ್ಕಾಗಿ ಸಂಕಲ್ಪ ಮಾಡಿ ನಿತ್ಯ ಕರ್ಮವನ್ನು ತೀರಿಸಿ ಋಷಿಗಳನ್ನು ಸ್ಥಾಪಿಸಿ ಪೂಜಿಸಬೇಕು. ಮೊದಲು ಋಷಿಗಳಿಗೆ ಪಂಚಾಮೃತಮಾಡಿ, ಚಂದನ, ಅಗರು, ಕರ್ಪೂರ ಮುಂತಾದ ಸುಗಂಧ ದ್ರವ್ಯಗಳಿಂದ ಹೂವುಗಳಿಂದ, ಧೂಪದೀಪಗಳಿಂದ ಫಲಗಳನ್ನು ನಿವೇದಿಸಿ ಎಲ್ಲರಿಗೂ ಕ್ರಮವಾಗಿ ಅರ್ಘ್ಯವನ್ನು ಕೊಟ್ಟು ಬ್ರಾಹ್ಮಣ ಸುವಾಸಿನಿಯರಿಗೆ ಭೋಜನ ಮಾಡಿಸಿ ತಮ್ಮ ಶಕ್ತ್ಯನುಸಾರವಾಗಿ ವಸ್ತ್ರಾಲಂಕಾರವನ್ನು ಕೊಟ್ಟು, ದಕ್ಷಿಣೆಯನ್ನು ಕೊಟ್ಟು ಪೂಜಿಸಬೇಕು. ಇಲ್ಲದಿದ್ದರೆ ಪಾಪಭಾಗಿನಿಯಾಗುವಳು. ವಿಧವೆಯು ಬ್ರಾಹ್ಮಣರ ಅಪ್ಪಣೆಪಡೆದು, ತನ್ನ ದೋಷ ಶಾಂತ್ಯರ್ಥವಾಗಿ ಈ ಪೂಜೆ ಮಾಡಬೇಕು. ಪೂಜೆಮಾಡುವ ದಿವಸ ಉಪವಾಸವಿದ್ದು ಮನಸ್ಸಿನಲ್ಲಿ ಋಷಿಗಳನ್ನು ಧ್ಯಾನ ಮಾಡುತ್ತಾ ವ್ರತಸ್ಥರಾಗಿಯೇ ಇರಬೇಕು ಎಂಬುದಾಗಿ ಉತ್ತಂಕನು ಹೇಳಲು, ಕೂಡಲೇ ಮಗಳ ಕಡೆಯಿಂದ ಋಷಿಪಂಚಮೀ ಪೂಜೆಯನ್ನು ಮಾಡಿಸಿದಳು. ಆ ವ್ರತದ ಪ್ರಭಾವದಿಂದ ಉತ್ತಂಕನ ಮಗಳು ರಜಸ್ವಲಾ ದೋಷದಿಂದ ಮುಕ್ತಳಾಗಿ ಉತ್ತಮಗತಿಯನ್ನು ಪಡೆದಳು. ಶ್ರೀಕೃಷ್ಣನು ಹೇಳುವನು, ಧರ್ಮರಾಜನೇ ಕೇಳು, ಸುಮತಿಯು ಕೂಡಲೆ ತನ್ನ ಮನೆಗೆ ಬಂದವನಾಗಿ ತನ್ನ ಹೆಂಡತಿಯಿಂದ ಈ ವ್ರತವನ್ನು ಮಾಡಿಸಿದನು. ಈ ವ್ರತದ ಪ್ರಭಾವದಿಂದ ಎಲ್ಲಾ ಪಾಪಗಳು ನಾಶಹೊಂದಿ ತನಗೆ ಬಂದಂಥ ಪುಣ್ಯಫಲವನ್ನು ತನ್ನ ತಾಯಿ ತಂದೆಗಳಿಗೆ ಕೊಟ್ಟನು. ತಾಯಿಯು ನಾಯಿಯ ಜನ್ಮದಿಂದ ಮುಕ್ತಳಾಗಿ ಸ್ವರ್ಗಲೋಕವನ್ನು ಕುರಿತು ಪ್ರಯಾಣ ಮಾಡಿದಳು. ತನ್ನ ತಂದೆಯು ಎತ್ತಿನ ಜನ್ಮದಿಂದ ಮುಕ್ತನಾಗಿ ಸೂರ್ಯನಂತೆ ಕಾಂತಿಯಿಂದ ಕೂಡಿದವನಾಗಿ ಸತ್ಯಲೋಕಕ್ಕೆ ಪ್ರಯಾಣ ಮಾಡಿದನು. ಧರ್ಮರಾಜನೇ ಉತ್ತಮವಾದ ಈ ಋಷಿಪಂಚಮೀವ್ರತವನ್ನು ನಿನಗೆ ಹೇಳಿದೆನು. ಇನ್ನೇನು ಹೇಳಲಿ

ಎಂದು ಕೇಳಿದಾಗ ಧರ್ಮರಾಜನು ಶ್ರೀಕೃಷ್ಣನೇ ಇದರ ವಿಧಿ ಹೇಗೆಂದು ಕೇಳಲು, ನಾನು ನಿನಗೆ ಮೊದಲು ಹೇಳಿದ ವಿಧಿಯಂತೆ ಈ ವ್ರತ ಮಾಡಿದಲ್ಲಿ ಶರೀರ - ವಚನ - ಮನಸ್ಸಿನಿಂದ ಉಂಟಾದ ಯಾವತ್ತು ಪಾಪಗಳು ಹೆಸರಿಲ್ಲದಂತೆ ನಾಶವಾಗುವುವು. ಮನೆಯಲ್ಲಿ ಧನ-ಧಾನ್ಯ ಸಂತತಿಯು ವೃದ್ಧಿಯಾಗುವುದು. ಕೊನೆಯಲ್ಲಿ ಉತ್ತಮ ಲೋಕವು ದೊರೆಯುವುದು.

ಈ ಕಥೆಯನ್ನು ಹೇಳುವುದು, ಹೇಳಿದ್ದನ್ನು ಕೇಳುವುದು ಹಾಗೂ ವ್ರತ ಮಾಡುವವರ ಯಾವತ್ತೂ ಪಾಪಗಳು ನಾಶವಾಗುವುವು. ಇದಕ್ಕೆ ಸಂಶಯವಿಲ್ಲ. ಹತ್ತು ಸಾವಿರ ಯಜ್ಞ ಮಾಡಿದ ಫಲವು ಎಲ್ಲಾ ವ್ರತಗಳನ್ನು ಮಾಡುವುದರಿಂದ ಯಾವ ಪುಣ್ಯ ಬರುವುದೋ ಎಲ್ಲಾ ತೀರ್ಥಯಾತ್ರೆಗೆ ಹೋಗುವುದರಿಂದ ಯಾವ ಫಲ ಬರುವುದೋ ಅಷ್ಟೂ ಫಲವು ಈ ಒಂದು ವ್ರತವನ್ನು ಮಾಡುವುದರಿಂದ ಬರುವುದು. ಹೆಂಗಸರು ಈ ವ್ರತವನ್ನು ಮಾಡಿದರೆ ರೂಪಲಾವಣ್ಯದಿಂದ ಕೂಡಿ ಮಕ್ಕಳು - ಮೊಮ್ಮಕ್ಕಳುಗಳಿಂದ ಬಹುಕಾಲ ಸುಖದಿಂದ ಇದ್ದು, ಇಹಲೋಕದಲ್ಲಿ ಬೇಕಾದ ಸುಖವನ್ನು ಅನುಭವಿಸಿ ಪರಲೋಕದಲ್ಲಿ ಉತ್ತಮ ಸ್ಥಾನ ಹೊಂದುವರು. ಎಲ್ಲಾ ವ್ರತಗಳಲ್ಲಿ ಶ್ರೇಷ್ಠವಾದ ಮತ್ತು ಸ್ತ್ರೀಯರಿಗೆ ಸಕಲ ಸಂಪತ್ತನ್ನು ಕೊಡುವ, ಪಾಪವನ್ನು ಕಳೆಯುವ ಈ ಋಷಿಪಂಚಮೀವ್ರತವನ್ನು ನಿನಗೆ ಹೇಳಿದೆನು. ಈ ವ್ರತದ ಕಥೆಯನ್ನು ಯಾರ ಹೇಳುವರು. ಯಾರು ಭಕ್ತಿಯಿಂದ ಕೇಳುವರು ಅವರೆಲ್ಲರೂ ಪಾಪದಿಂದ ಬಿಡುಗಡೆ ಹೊಂದಿ ಇಹಲೋಕದಲ್ಲಿ ಪುಷ್ಕಳವಾದ ಸೌಖ್ಯವನ್ನು ಪಡೆದು ಮುಂದಾದರೂ ಉತ್ತಮ ಗತಿಯನ್ನು ಹೊಂದುವರು.

॥ ಇತಿ ಋಷಿಪಂಚಮೀವ್ರತಕಥಾ ಸಂಪೂರ್ಣಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥



## ತೈಲಾಭ್ಯಂಜನದ ಶ್ಲೋಕ

**ಅರ್ಕೇ ತಾಪಂ ಕಾಂತಿರಿಂದೌ ನರಾಣಾಂ ಭೌಮೇ ಮೃತ್ಯುಃ ಸೋಮಜೇ ಪುತ್ರಲಾಭಃ ।**
**ಗುರೌ ರೋಗಃ ಭಾರ್ಗವೇ ವಿತ್ತಹಾನಿಃ ಮಂದೇಽಭ್ಯಂಗೋ ಹ್ಯಾಯುರಾರೋಗ್ಯವೃದ್ಧಿಃ ॥**

(ತೈಲಾಭ್ಯಂಗಸ್ನಾನವನ್ನು ಭಾನುವಾರ ಮಾಡಿದರೆ ತಾಪವನ್ನು, ಸೋಮವಾರ ಕಾಂತಿಯನ್ನು, ಮಂಗಳವಾರ ಮರಣಭಯವನ್ನು, ಬುಧವಾರ ಪುತ್ರಾದಿ ಸಂಪತ್ತನ್ನು, ಗುರುವಾರ ರೋಗವನ್ನು, ಶುಕ್ರವಾರ ಧನನಾಶವನ್ನು, ಶನಿವಾರ ಸಕಲ ಸಂಪತ್ತಿನ ಲಾಭವೂ ಆಗುತ್ತದೆ. ಆದರೆ ಸ್ತ್ರೀಯರಿಗೆ ಮಂಗಳವಾರ ಮತ್ತು ಶುಕ್ರವಾರಗಳು ಅಭ್ಯಂಗಸ್ನಾನಕ್ಕೆ ಶುಭದಿವಸಗಳು)

ವಿ.ಸೂ.: ಸಂಕ್ರಮಣ ದಿನತ್ರಯ, ಅಮಾವಾಸ್ಯಾದಿ ಪರ್ವದಿನಗಳಂದು ಅಭ್ಯಂಗವು ನಿಷಿದ್ಧವಾಗಿದೆ.



# ॥ ಶ್ರೀಜ್ಯೇಷ್ಠಾದೇವೀವ್ರತಮ್ ॥

## (ಭಾದ್ರಪದಮಾಸ ಶುಕ್ಲಪಕ್ಷ ಅಷ್ಟಮೀ)

ಆಚಮ್ಯ । ಪ್ರಾಣಾನಾಯಮ್ಯ । ದೇಶಕಾಲೌ ಸಂಕೀರ್ತ್ಯ । ಮಮೇಹ ಜನ್ಮನಿ ಜನ್ಮಾಂತರೇ ಚ ಅಖಂಡಸೌಭಾಗ್ಯ ಪುತ್ರ ಪೌತ್ರ ಐಶ್ವರ್ಯಾದಿ ಫಲಪ್ರಾಪ್ತಯೇ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ ಜ್ಯೇಷ್ಠಾದೇವೀ ಪತಿ ನಾರಾಯಣಪೂಜಾಂ ಕರಿಷ್ಯೇ ॥ (ಮಂತ್ರಾಕ್ಷತೆ-ನೀರನ್ನು ಅರ್ಘ್ಯಪಾತ್ರೆಗೆ ಬಿಡಿ)

**ಕಲಶಪೂಜಾ ।**

ಕಲಶಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಗಂಧಾಕ್ಷತೆ ಹಚ್ಚಿ ಅದರೊಳಗೆ ತುಳಸೀದಳ - ಬಿಡಿಹೂಗಳನ್ನು ಹಾಕಿಕೊಂಡು ಕಲಶದ ಮೇಲೆ ಬಲಗೈಯನ್ನಿಟ್ಟು ಕಲಶಪೂಜೆ ಮಾಡಬೇಕು. ಈ ಕಲಶದ ನೀರನ್ನೇ ಪೂಜೆಗೆ ಉಪಯೋಗಿಸಬೇಕು. ಪಂಚಪಾತ್ರೆಯ ನೀರನ್ನು ಆಚಮನಕ್ಕೆ ಮಾತ್ರ ಉಪಯೋಗಿಸಬೇಕು.

ಓಂ ॥ ಆಕಲಶೇಷು ಧಾವತಿ ಪವಿತ್ರೇ ಪರಿಷಿಚ್ಯತೇ ।
ಉಕ್ಥೈರ್ಯಜ್ಞೇಷು ವರ್ಧತೇ ॥
ಕಲಶಂ ಗಂಧಾಕ್ಷತಾಪತ್ರಪುಷ್ಪೈರಭ್ಯರ್ಚ್ಯ ॥
ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಸ್ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥
ಕುಕ್ಷೌ ತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಸ್ಸಾಮವೇದೋ ಹ್ಯಥರ್ವಣಃ ॥
ಅಂಗೈಶ್ಚ ಸಹಿತಾಸ್ಸರ್ವೇ ಕಲಶಂ ತು ಸಮಾಶ್ರಿತಾಃ ।
ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ ॥
ಆಯಾಂತು ದೇವಪೂಜಾರ್ಥಮಭಿಷೇಕಾರ್ಥಸಿದ್ಧಯೇ ॥

ಓಂ ॥ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣಿಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

ನಿರ್ವಿಷೀಕರಣಾರ್ಥಂ ತಾರ್ಕ್ಷ್ಯಮುದ್ರಾಂ ಪ್ರದರ್ಶಯಾಮಿ । ಅಮೃತೀಕರಣಾರ್ಥಂ ಧೇನುಮುದ್ರಾಂ ಪ್ರದರ್ಶಯಾಮಿ । ಪವಿತ್ರೀಕರಣಾರ್ಥಂ ಶಂಖಮುದ್ರಾಂ ಪ್ರದರ್ಶಯಾಮಿ । ಸಂರಕ್ಷಣಾರ್ಥಂ ಚಕ್ರಮುದ್ರಾಂ ಪ್ರದರ್ಶಯಾಮಿ । ದಿಗ್ಬಂಧನಾರ್ಥಂ ಗದಾಮುದ್ರಾಂ ಪ್ರದರ್ಶಯಾಮಿ ॥ ಜಲಶೋಧನಾರ್ಥಂ ಪದ್ಮಮುದ್ರಾಂ ಪ್ರದರ್ಶಯಾಮಿ ॥ ಓಂ ನಮೋ ನಾರಾಯಣಾಯೇತಿ ಮೂಲಮಂತ್ರಮಷ್ಟವಾರಂ ಜಪಿತ್ವಾ ॥

(ಕಲಶಕ್ಕೆ ತಾರ್ಕ್ಷ್ಯಾದಿ ಮುದ್ರೆಗಳನ್ನು ತೋರಿಸಿ, ನಾರಾಯಣಾಷ್ಟಾಕ್ಷರದಿಂದ 8 ಬಾರಿ ಕಲಶವನ್ನು ಅಭಿಮಂತ್ರಿಸಿ, ಮುಂದಿನ ಶ್ಲೋಕಗಳನ್ನು ಪಠಿಸಬೇಕು)

ಏಕಪಂಚಾಶದ್ವರ್ಣಾನಾಂ ಚತುರ್ವಿಂಶತಿಮೂರ್ತಯಃ ।
ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯಕಚ್ಛಪೌ ॥
ಕೋಲೋನ್ನೃಸಿಂಹಃ ಸ ವಟುರ್ಜಾಮದಗ್ನ್ಯರಘೂದ್ವಹೌ ।
ವಾಸಿಷ್ಠಯಾದವೌ ಕೃಷ್ಣಾವಾತ್ರೇಯೌ ಬುದ್ಧಕಲ್ಕಿನೌ ॥
ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶದೇವತಾಃ ।
ಏತಾಭಿಃ ಸಹಿತಾಂ ಮೂಲಮೂರ್ತಿಂ ಕುಂಭೋದಕೇ ಸುಧೀಃ ॥

ಕಲಶಃ ಕೀರ್ತಿಮಾಯುಷ್ಯಂ ಪ್ರಜ್ಞಾಂ ಮೇಧಾಂ ಶ್ರಿಯಂ ಬಲಮ್ ।
ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಸಾಧಯೇತ್ ॥

ಸರ್ವತೀರ್ಥಮಯೋ ಯಸ್ಮಾತ್ಸರ್ವಕ್ಷೇತ್ರಮಯೋ ಯತಃ ।
ಅತೋ ಹರಿಪ್ರಿಯೋಽಸಿ ತ್ವಂ ಪೂರ್ಣಕುಂಭ ನಮೋಽಸ್ತು ತೇ ॥

ಕಲಶದೇವತಾಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀ-ನಾರಾಯಣಾಯ ನಮಃ, ಧ್ಯಾನಾದಿಷೋಡಶೋಪಚಾರಪೂಜಾಂ ಸಮರ್ಪಯಾಮಿ ॥

'ಓಂ ನಮೋ ನಾರಾಯಣಾಯ' ಎಂದು ಅಷ್ಟಾಕ್ಷರಮಂತ್ರದಿಂದ ಕಲಶದ ನೀರನ್ನು 8-12 ಬಾರಿ ಅಭಿಮಂತ್ರಿಸಿ, ಉದ್ಧರಣೆಯಿಂದ ಆ ನೀರನ್ನು ಎಡಗೈಯಲ್ಲಿ ಹಿಡಿದುಕೊಂಡು ಬಲಗೈಯಲ್ಲಿ ತುಳಸೀದಳ ಅಥವಾ ಬಿಡಿಹೂವೊಂದನ್ನು ಹಿಡಿದುಕೊಂಡು, ಆ ನೀರನ್ನು ಪೂಜಾಸಾಮಗ್ರಿಗಳಿಗೆಲ್ಲಾ ಪ್ರೋಕ್ಷಿಸಿ, ಕೊನೆಗೆ ತನಗೂ ಪ್ರೋಕ್ಷಿಸಿಕೊಂಡು ಉಳಿದ ನೀರನ್ನು ಮತ್ತು ಕೈಯಲ್ಲಿರುವ ತುಳಸೀ / ಹೂವನ್ನು ಅರ್ಘ್ಯಪಾತ್ರೆಗೆ ಹಾಕಬೇಕು. ಪ್ರೋಕ್ಷಣೆ ಮಾಡಿಕೊಳ್ಳುವಾಗ "ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ । ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥" ಎಂಬ ಮಂತ್ರವನ್ನು ಹೇಳಬೇಕು.

**ಪೀಠಪೂಜಾ ।**

ಪೀಠಮಧ್ಯೇ ಪರದೇವತಾಯೈ ಶ್ರೀಲಕ್ಷ್ಮೀನಾರಾಯಣಾಯ ನಮಃ । ದೇವಸ್ಯ ವಾಮಭಾಗೇ ಗುರವೇ ವಾಯುವೇ ನಮಃ । ದಕ್ಷಿಣೇ ಸರ್ವದೇವತಾಭ್ಯೋ ಬ್ರಹ್ಮರುದ್ರಾದಿಭ್ಯೋ ನಮಃ । ಪುನರ್ವಾಮೇ ಸನಕಾದಿಸರ್ವಗುರುಭ್ಯೋ ನಮಃ । ಆಗ್ನೇಯೇ ಗಂ ಗರುಡಾಯ ನಮಃ । ನೈಋತ್ಯಾಂ ವ್ಯಾಂ ವೇದವ್ಯಾಸಾಯ ನಮಃ । ವಾಯವ್ಯೇ ದುಂ ದುರ್ಗಾಯೈ ನಮಃ । ಈಶಾನ್ಯೇ ಸಂ ಸರಸ್ವತ್ಯೈ ನಮಃ ॥ ಏತಾಃ **ಪೀಠಪಾದದೇವತಾಃ** ॥ ಧರ್ಮಾಧಿಪತಯೇ ಯಮಾಯ ನಮಃ । ಜ್ಞಾನಾಧಿಪತಯೇ ವಾಯವೇ ನಮಃ । ವೈರಾಗ್ಯಾಧಿಪತಯೇ ರುದ್ರಾಯ ನಮಃ । ಐಶ್ವರ್ಯಾಧಿಪತಯೇ ಇಂದ್ರಾಯ ನಮಃ ॥ ಏತಾಃ **ಪೀಠಫಲಕದೇವತಾಃ** ॥ ಅಧರ್ಮಾಧಿಪತಯೇ ನಿರ್ಋತಯೇ ನಮಃ । ಅಜ್ಞಾನಾಧಿಪತಯೇ ದುರ್ಗಾಯೈ ನಮಃ । ಅವೈರಾಗ್ಯಾಧಿಪತಯೇ ಕಾಮಾಯ ನಮಃ । ಅನೈಶ್ವರ್ಯಾಧಿಪತಯೇ ರುದ್ರಾಯ ನಮಃ ॥ ಮಧ್ಯೇ ಪಾತಾಲೇ ಪರಮಪುರುಷಾಯ ನಮಃ । ತದುಪರ್ಯುದಕೇ ಬ್ರಹ್ಮಾಂಡಾಧಾರಾಯ ವಿಷ್ಣುಕೂರ್ಮಾಯ ನಮಃ । ತದುಪರಿ ಗರ್ಭೋದಕೇ ಕೂರ್ಮರೂಪಾಯ ವಿಷ್ಣವೇ ನಮಃ । ತತ್ಪೃಷ್ಠಾಶ್ರಿತಾಯ ವಾಯುಕೂರ್ಮಾಯ ನಮಃ । ತತ್ಪೃಷ್ಠಾಶ್ರಿತಾಯ ಸಹಸ್ರಫಣಾಮಂಡಲಮಂಡಿತಾಯ ಶ್ರೀಮದನಂತಾಯ ನಮಃ । ಪೃಥಿವ್ಯಭಿಮಾನಿನ್ಯೈ ಧರಾಯೈ ನಮಃ । ಕ್ಷೀರಸಾಗರಾಭಿಮಾನಿನೇ ವರುಣಾಯ ನಮಃ । ಶ್ವೇತದ್ವೀಪಾತ್ಮಿಕಾಯೈ ರಮಾಯೈ ನಮಃ । ತತ್ರ ನವರತ್ನಖಚಿತಚತುಸ್ತಂಭಯುಕ್ತಮಹಾಮಂಟಪಾತ್ಮಿಕಾಯೈ ಶ್ರೀಲಕ್ಷ್ಮ್ಯೈ ನಮಃ । ಪದ್ಮಾತ್ಮಿಕಾಯೈ ಶ್ರಿಯೈ ನಮಃ । ಕಂದಾತ್ಮಿಕಾಯೈ ಶ್ರಿಯೈ ನಮಃ । ನಾಳಾತ್ಮಿಕಾಯೈ ಶ್ರಿಯೈ ನಮಃ । ತತ್ಕರ್ಣಿಕಾತ್ಮಿಕಾಯೈ ಶ್ರಿಯೈ ನಮಃ ॥ ಪದ್ಮಾದ್ಬಹಿಃ ಸೂರ್ಯಮಂಡಲಾಧಿಪತಯೇ ಶ್ರೀನಾರಾಯಣಾಯ ನಮಃ । ಸೋಮಮಂಡಲಾಧಿ- ಪತಯೇ ಶ್ರೀವಿಷ್ಣವೇ ನಮಃ । ಹುತಾಶನಮಂಡಲಾಧಿಪತಯೇ ಶ್ರೀಲಕ್ಷ್ಮೀನರಸಿಂಹಾಯ ನಮಃ ॥ ದಕ್ಷಿಣೇ ಸತ್ವಾಭಿಮಾನಿನ್ಯೈ ಶ್ರಿಯೈ ನಮಃ । ವಾಮೇ ರಜೋಭಿಮಾನಿನ್ಯೈ ಧರಾಯೈ ನಮಃ । ಪೃಷ್ಠೇ ತಮೋಭಿಮಾನಿನ್ಯೈ ದುರ್ಗಾಯೈ ನಮಃ ॥ ಪೂರ್ವೇ ಆತ್ಮನೇ ನಮಃ । ದಕ್ಷಿಣೇ ಅಂತರಾತ್ಮನೇ ನಮಃ । ಪಶ್ಚಿಮೇ ಪರಮಾತ್ಮನೇ ನಮಃ । ಉತ್ತರೇ ಜ್ಞಾನಾತ್ಮನೇ ನಮಃ ॥ ವಿಮಲಾಯೈ ನಮಃ । ಉತ್ಕರ್ಷಿಣ್ಯೈ ನಮಃ । ಜ್ಞಾನಾಯೈ ನಮಃ । ಕ್ರಿಯಾಯೈ ನಮಃ । ಯೋಗಾಯೈ ನಮಃ । ಪ್ರಹ್ವ್ಯೈ ನಮಃ । ಸತ್ಯಾಯೈ ನಮಃ । ಈಶಾನಾಯೈ ನಮಃ । ಮಧ್ಯೇ ಅನುಗ್ರಹಾಯೈ ನಮಃ ॥ ಏತಾಃ ವೀಜಿತಚಾಮರಹಸ್ತಾಃ ತಿಷ್ಠಂತಿ ॥ ತಸ್ಯಾಗ್ರೇ ಸಹಸ್ರಫಣಾಮಂಡಲಮಂಡಿತಾಯ ಕುಂಡಲಾಕೃತಿಸ್ವರೂಪಾಯ ಹರೇರ್ಯೋಗಪೀಠ- ಸ್ವರೂಪಾಯ ಶ್ರೀಮದನಂತಾಯ ನಮಃ ॥ ಪೀಠಪೂಜಾಂ ಸಮರ್ಪಯಾಮಿ ॥ (ಪೀಠಕ್ಕೆ ಮಂತ್ರಾಕ್ಷತೆ ಮತ್ತು ಬಿಡಿಹೂಗಳನ್ನು ಹಾಕಬೇಕು. ಪ್ರತಿಯೊಂದು ನಾಮಗಳ ಆರಂಭದಲ್ಲಿ ಓಂಕಾರವನ್ನು ಸೇರಿಸಿಕೊಳ್ಳಬೇಕು)

## ॥ ಪ್ರಾಣಪ್ರತಿಷ್ಠಾವಿಧಿಃ ॥

ಅಧೋಮುಖಂ ಹೃತ್ಕಮಲಂ ತೋರಣೋದ್ಧರಣಂ ಚರೇತ್ ।
ವಿಕಾಸ್ಯ ಜ್ಞಾನರವಿಣಾ ಕರ್ಣಿಕಾಸ್ಥಂ ಪರಂ ವಿಭುಮ್ ॥

ಹೃದಯಸ್ಥಾ ಹರೇರ್ಮೂರ್ತಿಃ ಜೀವೋ ಯತ್ಪ್ರತಿಬಿಂಬಕಃ ।
ಯದ್ವಶೇ ವರ್ತತೇ ಜೀವಃ ಸಾ ತು ಜೀವಕಲಾ ಸ್ಮೃತಾ ॥

ಜೀವಾಂತರ್ಯಾಮಿತೋ ವಿಷ್ಣುಃ ಆತ್ಮಾ ನಾಮ ಪ್ರಕೀರ್ತಿತಃ ।
ತೇಜಸ್ಸಾರಮಯೀಂ ದಿವ್ಯಾಂ ಪ್ರತಿಮಾಂ ಪ್ರತಿಮಾಗತಾಮ್ ॥

ಧ್ಯಾತ್ವಾ ಪ್ರಾಣಾಧಿಪಂ ತತ್ರ ಪ್ರತಿಮಾರೂಪಿಣಂ ಪ್ರಭುಮ್ ।
ತನ್ಮಧ್ಯೇ ರಮಯಾ ಸಾರ್ಧಮಾಸೀನಂ ಕ್ಷೀರನೀರವತ್ ॥
ಪ್ರತಿಮಾರೂಪಿಣಂ ಸಮ್ಯಗ್ಧ್ಯಾತ್ವೈವಾವಾಹಯೇತ್ಸುಧೀಃ ॥

ಓಂ ॥ ಆತ್ಮಾದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ ।
ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ॥

ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ಶ್ರೀಪುರುಷೋತ್ತಮ ।
ಆವಾಹಯಾಮಿ ಪೀಠೇ ತ್ವಾಂ ಪ್ರತಿಮಾಯಾಂ ಜಗತ್ಪತೇ ।
ಇತಿ ಸಂಪ್ರಾರ್ಥ್ಯ ದೇವೇಶಂ ಷಣ್ಮುದ್ರಾಂಶ್ಚ ಪ್ರದರ್ಶಯೇತ್ ॥

(ಹೃದಯಕಮಲದಲ್ಲಿರುವ ಶ್ರೀಹರಿಯನ್ನು ಶ್ವಾಸಮಾರ್ಗದಿಂದ ಹಸ್ತಗಳಲ್ಲಿರುವ ಪುಷ್ಪಗಳಲ್ಲಿ ಬಂದಿರುವನೆಂದು ಚಿಂತಿಸಿ, ಕಲಶ / ಪ್ರತಿಮೆಗಳ ಮೇಲೆ ಹಾಕಿ ಆವಾಹಿಸಬೇಕು)

ಓಂ ಆವಾಹಿತೋ ಭವ । ಸ್ಥಾಪಿತೋ ಭವ । ಸನ್ನಿಹಿತೋ ಭವ ।
ಅವಕುಂಠಿತೋ ಭವ । ಸುಪ್ರಸನ್ನೋ ಭವ । ವರದೋ ಭವ ॥

ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ಕರೋ ಭವ ।
ವಿಭೋ ಸಕಲಲೋಕೇಶ ದೇವದೇವ ಜಗತ್ಪತೇ ॥

ತ್ವಾಂ ಪೂಜಯಾಮಿ ಸದ್ಭಕ್ತ್ಯಾ ಭೋಗೈರರ್ಘ್ಯಾದಿಭಿಃ ಕ್ರಮಾತ್ ।
ಯಾಗಾವಸಾನಪರ್ಯಂತಂ ಅತ್ರ ಸ್ಥಿತ್ವಾ ಜಗತ್ಪತೇ ॥
ಭಕ್ತಸ್ಯ ಮಮ ಪೂಜಾಂ ಚ ಗೃಹೀತ್ವಾ ಪಾಹಿ ಮಾಂ ಪ್ರಭೋ ॥

ಧ್ಯಾನಮ್ ।

ದೇವಾನಾಂ ದೇವತಾನಾಂ ಚ ಜ್ಯೇಷ್ಠಾದೇವೀ ತ್ವಮಾದಿಮಾ ।
ಆದಿಶಕ್ತಿ ನಮಸ್ತೇಽಸ್ತು ನಮಸ್ತೇ ವಿಷ್ಣುವಲ್ಲಭೇ ॥
ಜ್ಯೇಷ್ಠಾದೇವ್ಯೈ ನಮಃ । ಧ್ಯಾಯಾಮಿ ಧ್ಯಾನಂ ಸಮರ್ಪಯಾಮಿ ॥
(ಮಂತ್ರಾಕ್ಷತೆಯನ್ನು ಹಾಕಬೇಕು)

**ಆವಾಹನಮ್ ।**

ಬ್ರಹ್ಮಪ್ರಸೂರ್ನಮಸ್ತೇಽಸ್ತು ನಮಸ್ತೇ ಭಕ್ತವತ್ಸಲೇ ।
ವಿಷ್ಣುಪ್ರಿಯೇ ನಮಸ್ತೇಽಸ್ತು ಜಗದಾನಂದಕಾರಕೇ ॥
ಜ್ಯೇಷ್ಠಾದೇವ್ಯೈ ನಮಃ । ಆವಾಹನಂ ಸಮರ್ಪಯಾಮಿ ॥
(ಮಂತ್ರಾಕ್ಷತೆಯನ್ನು ಹಾಕಬೇಕು)

**ಆಸನಮ್ ।**

ಆಸನೇ ಸ್ವರ್ಣರತ್ನಾಢ್ಯೇ ಸರ್ವಶೋಭಾ ಸಮನ್ವಿತೇ ।
ಉಪವಿಶ್ಯ ಜಗನ್ಮಾತಃ ಪ್ರಸಾದಾಭಿಮುಖೀ ಭವ ॥
ಜ್ಯೇಷ್ಠಾದೇವ್ಯೈ ನಮಃ । ಆಸನಂ ಸಮರ್ಪಯಾಮಿ ॥
(ಮಂತ್ರಾಕ್ಷತೆಯನ್ನು ಹಾಕಬೇಕು)

**ಪಾದ್ಯಮ್ ।**

ಗಂಧಪುಷ್ಪಾಕ್ಷತೈರ್ಯುಕ್ತಂ ಪಾದ್ಯಂ ಸಂಪಾದಿತಂ ಮಯಾ ।
ಜ್ಯೇಷ್ಠಾದೇವೀ ನಮಸ್ತುಭ್ಯಂ ಸರ್ವಾನ್ ಕಾಮಾಂಶ್ಚ ಪೂರಯ ।
ಜ್ಯೇಷ್ಠಾದೇವ್ಯೈ ನಮಃ । ಪಾದ್ಯಂ ಸಮರ್ಪಯಾಮಿ ॥
(ಮೀಸಲು ನೀರನ್ನು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು)

**ಅರ್ಘ್ಯಮ್ ।**

ಗಂಧಪುಷ್ಪಾಕ್ಷತಾರಕ್ತಪುಷ್ಪಸ್ತೋಮೈಃ ಸಮನ್ವಿತಮ್ ।
ಸುವರ್ಣಪಾತ್ರೇ ಚಾರ್ವಂಗೀ ಗೃಹಾಣಾರ್ಘ್ಯಂ ನಮೋಽಸ್ತು ತೇ ॥
ಜ್ಯೇಷ್ಠಾದೇವ್ಯೈ ನಮಃ । ಅರ್ಘ್ಯಂ ಸಮರ್ಪಯಾಮಿ ॥
(ಮೀಸಲು ನೀರನ್ನು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು)

**ಆಚಮನೀಯಮ್ ।**

ಕರ್ಪೂರೈಲಾಮೃಗಮದೈಃ ಸುವಾಸೈರುಪಶೋಭಿತಮ್ ।
ಗೃಹಾಣಾಚಮನೀಯಂ ಚ ಶಿಶಿರಂ ವಿಮಲಂ ಜಲಮ್ ॥
ಜ್ಯೇಷ್ಠಾದೇವ್ಯೈ ನಮಃ । ಆಚಮನೀಯಂ ಸಮರ್ಪಯಾಮಿ ॥
(ಮೀಸಲು ನೀರನ್ನು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು)

**ಸ್ನಾನಮ್ ।**

ನದೀನದಸಮುದ್ಭೂತಂ ಪವಿತ್ರಂ ನಿರ್ಮಲಂ ಜಲಮ್ ।
ಸ್ನಾನಾರ್ಥಂ ತೇ ಪ್ರಯಚ್ಛಾಮಿ ಪ್ರಸೀದ ಜಗದಂಬಿಕೇ ॥
ಜ್ಯೇಷ್ಠಾದೇವ್ಯೈ ನಮಃ । ಸ್ನಾನಂ ಸಮರ್ಪಯಾಮಿ ॥
(ಬಿಡಿ ಹೂವಿನಿಂದ ನೀರನ್ನು ಅದ್ದಿ ದೇವಿಗೆ ಪ್ರೋಕ್ಷಿಸಬೇಕು)

**ಪಂಚಾಮೃತಸ್ನಾನಮ್ ।**

ಪಂಚಾಮೃತೇನ ಸ್ನಪನಂ ಕರಿಷ್ಯೇ ಭಕ್ತವತ್ಸಲೇ ।
ಪಯೋದಧಿ ಘೃತಂ ಚೈವ ಮಾಕ್ಷಿಕಂ ಶರ್ಕರಾಯುತಮ್ ॥
ಜ್ಯೇಷ್ಠಾದೇವ್ಯೈ ನಮಃ । ಪಂಚಾಮೃತಸ್ನಾನಂ ಸಮರ್ಪಯಾಮಿ ॥
(ದೇವಿಗೆ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಹಣ್ಣು ಇವುಗಳಿಂದ ಪಂಚಾಮೃತಾಭಿಷೇಕ ಮಾಡಬೇಕು)

**ಶುದ್ಧೋದಕಸ್ನಾನಮ್ ।**

ಮಂದಾಕಿನ್ಯಾಃ ಸಮಾನೀತಂ ಹೇಮಾಂಭೋರುಹವಾಸಿತಮ್ ।
ಸ್ನಾನಾರ್ಥಂ ತೇ ಮಯಾಽಽನೀತಂ ಗೃಹಾಣ ಜಗದಂಬಿಕೇ ॥
ಜ್ಯೇಷ್ಠಾದೇವ್ಯೈ ನಮಃ । ಶುದ್ಧೋದಕಸ್ನಾನಂ ಸಮರ್ಪಯಾಮಿ ॥
(ಬಿಡಿ ಹೂವಿನಿಂದ ನೀರನ್ನು ಅದ್ದಿ ದೇವಿಗೆ ಪ್ರೋಕ್ಷಿಸಬೇಕು)

**ವಸ್ತ್ರಮ್ ।**

ಕೌಶೇಯವಸನಂ ದಿವ್ಯಂ ಕಂಚುಕ್ಯಾ ಚ ಸಮನ್ವಿತಮ್ ।
ಉಪವಸ್ತ್ರೇಣ ಸಂವೀತಂ ಗೃಹಾಣ ಪರಮೇಶ್ವರಿ ॥
ಜ್ಯೇಷ್ಠಾದೇವ್ಯೈ ನಮಃ । ವಸ್ತ್ರಂ ಸಮರ್ಪಯಾಮಿ ॥
(ದೇವಿಗೆ ಗೆಜ್ಜೆವಸ್ತ್ರವನ್ನು ಸಮರ್ಪಿಸಬೇಕು)

**ಗಂಧಃ ।**

ಇದಂ ಗಂಧಂ ಮಹದ್ದಿವ್ಯಂ ಕುಂಕುಮೇನ ಸಮನ್ವಿತಮ್ ।
ವಿಲೇಪನಾರ್ಥೇ ಮೇ ದತ್ತಂ ಗೃಹಾಣ ವರದಾ ಭವ ॥
ಜ್ಯೇಷ್ಠಾದೇವ್ಯೈ ನಮಃ । ಗಂಧಂ ಸಮರ್ಪಯಾಮಿ ॥
(ದೇವಿಗೆ ಹರಿನಿವೇದಿತ ಗಂಧವನ್ನು ಸಮರ್ಪಿಸಬೇಕು)

**ಅಕ್ಷತಾಃ ।**

ಅಕ್ಷತಾನ್ ಧವಲಾಕಾರಾನ್ ಶಾಲಿತಂಡುಲಮಿಶ್ರಿತಾನ್ ।
ಕುಂಕುಮೇನ ಸಮಾಯುಕ್ತಾನ್ ಗೃಹಾಣ ತ್ರಿದಶೇಶ್ವರಿ ॥
ಜ್ಯೇಷ್ಠಾದೇವ್ಯೈ ನಮಃ । ಅಕ್ಷತಾನ್ ಸಮರ್ಪಯಾಮಿ ॥
(ದೇವಿಗೆ ಮಂತ್ರಾಕ್ಷತೆಯನ್ನು ಸಮರ್ಪಿಸಬೇಕು)

**ಪುಷ್ಪಾಣಿ ।**

ನಾನಾವಿಧಾನಿ ಮಾಲ್ಯಾನಿ ಸುಗಂಧೀನಿ ಹರಿಪ್ರಿಯೇ ।
ಗೃಹಾಣ ಜ್ಯೇಷ್ಠಾಗೌರೀ ತ್ವಂ ಪ್ರಸಾದಾಭಿಮುಖೀ ಭವ ॥
ಜ್ಯೇಷ್ಠಾದೇವ್ಯೈ ನಮಃ । ಪುಷ್ಪಾಣಿ ಸಮರ್ಪಯಾಮಿ ॥
(ದೇವಿಗೆ ಪುಷ್ಪಗಳನ್ನು ಸಮರ್ಪಿಸಬೇಕು)

**ಧೂಪಃ ।**

ವನಸ್ಪತಿರಸೋದ್ಭೂತಂ ನಾನಾಗಂಧಸಮನ್ವಿತಮ್ ।
ದಶಾಂಗಸಹಿತಂ ದಿವ್ಯಂ ಧೂಪಂ ದೇವಿ ಗೃಹಾಣ ಭೋ ॥
ಜ್ಯೇಷ್ಠಾದೇವ್ಯೈ ನಮಃ । ಧೂಪಮಾಘ್ರಾಪಯಾಮಿ ॥
(ದೇವಿಗೆ ಧೂಪಾರತಿಯನ್ನು ಮಾಡಬೇಕು)

**ದೀಪಮ್ ।**

ದೀಪಂ ತಮೋಹರಂ ಜ್ಯೋತ್ಸ್ನಾ ಜ್ಞಾನಸಂಬೋಧಕಂ ಶುಭಮ್ ।
ದೀಪಂ ಗೃಹಾಣ ಮಾತಸ್ತ್ವಂ ಅಜ್ಞಾನಂ ಮೇ ವ್ಯಪೋಹಯ ॥
ಜ್ಯೇಷ್ಠಾದೇವ್ಯೈ ನಮಃ । ದೀಪಂ ದರ್ಶಯಾಮಿ ॥
(ದೇವಿಗೆ ಮೂರು ಬತ್ತಿಯಿಂದ ಏಕಾರತಿಯನ್ನು ಮಾಡಬೇಕು)

**ನೈವೇದ್ಯಮ್ ।**

ನಾನಾವಿಧಾನಿ ಭಕ್ಷ್ಯಾಣಿ ವ್ಯಂಜನಾನಿ ಹರಿಪ್ರಿಯೇ ।
ಗೃಹಾಣ ದೇವಿ ನೈವೇದ್ಯಂ ಸುಖದಂ ಸರ್ವದೇಹಿನಾಮ್ ॥
ಜ್ಯೇಷ್ಠಾದೇವ್ಯೈ ನಮಃ । ನೈವೇದ್ಯಂ ದರ್ಶಯಾಮಿ ॥
(ಹರಿಗೆ ನಿವೇದಿಸಿದ ದೇವಿಗೆ ನೈವೇದ್ಯವನ್ನು ಸಮರ್ಪಿಸಬೇಕು)

**ಪಾನೀಯಮ್ ।**

ಗಂಗೋದಕಂ ಸಮಾನೀತಂ ಪಾನಾರ್ಥಂ ಜಲಮುತ್ತಮಂ ।
ಕುರುಷ್ವ ಪ್ರಾಶನಂ ದೇವಿ ವರದಾ ಭವ ಇಂದಿರೇ ॥
ಜ್ಯೇಷ್ಠಾದೇವ್ಯೈ ನಮಃ । ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ ॥
ಉತ್ತರಾಪೋಶನಂ ಸಮರ್ಪಯಾಮಿ ॥ ಹಸ್ತಪ್ರಕ್ಷಾಲನಂ ಸಮರ್ಪಯಾಮಿ ॥
ಮುಖಪ್ರಕ್ಷಾಲನಂ ಸಮರ್ಪಯಾಮಿ ॥ ಆಚಮನಂ ಸಮರ್ಪಯಾಮಿ ॥
ಕರೋದ್ವರ್ತನಂ ಸಮರ್ಪಯಾಮಿ ॥
(ಮೀಸಲು ನೀರನ್ನು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು)

**ಫಲಾನಿ ।**

ರಂಭಾಫಲಂ ದಾಡಿಮಂ ಚ ಖರ್ಜೂರಂ ಮಾತುಲಿಂಗಕಂ ।
ಗೃಹ್ಯತಾಂ ನಾರಿಕೇಲಾದಿ ಫಲಾನಿ ಜಗದಂಬಿಕೇ ॥
ಜ್ಯೇಷ್ಠಾದೇವ್ಯೈ ನಮಃ । ನಾನಾವಿಧಫಲಾನಿ ಸಮರ್ಪಯಾಮಿ ॥
(ಪರಮಾತ್ಮನಿಗೆ ಮೊದಲು ಅರ್ಪಿಸಿ, ನಂತರ ದೇವಿಗೆ ಹಣ್ಣುಗಳನ್ನು ಸಮರ್ಪಿಸಬೇಕು)

**ತಾಂಬೂಲಮ್ ।**

ಪೂಗೀಫಲಂ ಮಹದ್ದಿವ್ಯಂ ನಾಗವಲ್ಲೀದಲೈರ್ಯುತಮ್ ।
ಕರ್ಪೂರಾದಿ ಸಮಾಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥

ಜ್ಯೇಷ್ಠಾದೇವ್ಯೈ ನಮಃ । ಪೂಗೀಫಲತಾಂಬೂಲಂ ಸ.....॥
ಜ್ಯೇಷ್ಠಾದೇವ್ಯೈ ನಮಃ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ॥
(ದೇವಿಗೆ ಎಲೆ-ಅಡಿಕೆಯೊಂದಿಗೆ ದಕ್ಷಿಣೆಯನ್ನು ಸಮರ್ಪಿಸಬೇಕು)

**ಮಂಗಲನೀರಾಜನಮ್ ।**

ನೀರಾಜಯಾಮಿ ದೇವೇಶಿ ಕರ್ಪೂರಾದ್ಯೈಃ ಸುದೀಪಕೈಃ ।
ಗೃಹಾಣ ಮಂಗಲಾನ್ ದೀಪಾನ್ ವರದಾ ಭವ ಶೋಭನೇ ॥
ಜ್ಯೇಷ್ಠಾದೇವ್ಯೈ ನಮಃ । ಮಹಾನೀರಾಜನಂ ಸಮರ್ಪಯಾಮಿ ॥ ಮಂತ್ರಪುಷ್ಪಂ ಸಮರ್ಪಯಾಮಿ ॥ ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ ॥ ಪ್ರಾರ್ಥನಾಂ ಸಮರ್ಪಯಾಮಿ ॥
(ದೇವಿಗೆ ಐದು ಬತ್ತಿಯಿಂದ ಮಂಗಳಾರತಿಯನ್ನು ಮಾಡಿ, ಮಂತ್ರಪುಷ್ಪಗಳನ್ನು ಸಮರ್ಪಿಸಬೇಕು. ಪ್ರದಕ್ಷಿಣೆ ಹಾಕಿ, ಪ್ರಾರ್ಥಿಸಬೇಕು)

**ಸಮಾಪನಮ್ ।**

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮುಚ್ಯುತಮ್ ॥

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಜ್ಯೇಷ್ಠಾಗೌರೀಪೂಜನೇನ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಜ್ಯೇಷ್ಠಾದೇವೀಪತಿನಾರಾಯಣಃ ಪ್ರೀಯತಾಂ ಸುಪ್ರೀತೋ ವರದೋ ಭವತು ಶ್ರೀಕೃಷ್ಣಾರ್ಪಣಮಸ್ತು ॥

॥ ಇತಿ ಜ್ಯೇಷ್ಠಾದೇವೀವ್ರತಮ್ ಸಂಪೂರ್ಣಮ್ ॥



## ಸುಖಪ್ರವಾಸ ಮಂತ್ರಃ

ಪ್ರಯಾಣೇ ಗರುಡಾರೂಢಂ ಪಾರಿಜಾತಹರಂ ಹರಿಂ ।
ಸತ್ಯಯಾ ಸಹಿತಂ ಧ್ಯಾಯೇತ್ಸರ್ವಕಾರ್ಯಾರ್ಥ ಸಿದ್ಧಯೇ ॥

ಅಗ್ರತೋ ನಾರಸಿಂಹಶ್ಚ ಪೃಷ್ಠತೋ ಗೋಪಿನಂದನಃ ।
ಉಭಯೋಃ ಪಾರ್ಶ್ವಯೋರಾಸ್ತಾಂ ಸಶರೌ ರಾಮಲಕ್ಷ್ಮಣೌ ॥

ಗಚ್ಛ ಗೌತಮ ಶೀಘ್ರಂ ತ್ವಂ ಗ್ರಾಮೇಷು ನಗರೇಷು ಚ ।
ಆಸನಂ ಭೋಜನಂ ಶಯ್ಯಾಂ ಕಲ್ಪಯಸ್ವ ಮಮಾಗ್ರತಃ ॥

✦ ✦ ✦

# ॥ ಶ್ರೀಜ್ಯೇಷ್ಠಾದೇವೀ ವ್ರತದ ಕಥೆ ॥

"ಪಾರ್ವತಿಯು ರಮ್ಯವಾದ ಕೈಲಾಸಶಿಖರದಲ್ಲಿ ಪ್ರಸನ್ನಮುಖನಾಗಿ ಕೂತಿರುವ ಮಹಾಪ್ರಭುವಾದ ಈಶ್ವರನನ್ನು ಪ್ರಶ್ನೆ ಮಾಡಿದಳು. "ಹೇ ಸ್ವಾಮಿ! ಜನರುಗಳಿಗೆ ಹಿತಕರವಾದ, ಮುಖ್ಯವಾಗಿ ಸ್ತ್ರೀಯರಿಗೆ, ತತ್‌ಕ್ಷಣದಲ್ಲಿಯೇ ಯಾವ ವ್ರತದಿಂದ ನಿಜವಾದ ಸುಖವಾದೀತೋ, ಯಾವ ವ್ರತದಿಂದ ಸೌಭಾಗ್ಯ ಸಂತತಿ ಸಂಪತ್ಪ್ರಾಪ್ತಿ ಹಾಗೂ ಮನಸ್ಸಿನ ಅಪೇಕ್ಷಿತವಾದ ಕಾರ್ಯವಾದೀತೋ ಅಂತಹ ಅತ್ಯಂತ ದುರ್ಲಭವಾದ ವ್ರತವನ್ನು ನನಗಾಗಿ ಹೇಳು". ಈ ಮಾತನ್ನು ಕೇಳಿ, ಮುಗುಳುನಗೆಯಿಂದ ಶಂಕರನು ಮಾತನಾಡುತ್ತಾನೆ, "ಹೇ ಪಾರ್ವತಿಯೇ, ಜ್ಯೇಷ್ಠಾದೇವೀ ನಾಮಕವಾದ ಒಂದು ವ್ರತವಿದೆ. ಅದು ಇಹದಲ್ಲಿ ಸೌಖ್ಯವನ್ನೂ ಪರದಲ್ಲಿ ಮುಕ್ತಿಯನ್ನೂ ಕೊಡುವಂತಹದು. ಸರ್ವವ್ರತಗಳಲ್ಲಿಯೂ ಶ್ರೇಷ್ಠವಾದದ್ದು ಈ ವ್ರತವು. ಈ ವ್ರತವನ್ನು ಯಾವ ಸುವಾಸಿನಿಯು ಮಾಡುವಳೋ ಆ ಸ್ತ್ರೀಯು ಸರ್ವದಾ ಸುಖವನ್ನೇ ಹೊಂದುತ್ತಾಳೆ. ಯಾವಾಗ್ಯೂ ದುಃಖವನ್ನು ಹೊಂದುವುದಿಲ್ಲ". ಹೀಗೆ ಹೇಳಿದ ಶಂಕರನ ಮಾತನ್ನು ಕೇಳಿ ಪಾರ್ವತಿಯು, "ಹೇ ದೇವ ಆ ಜ್ಯೇಷ್ಠಾದೇವಿಯ ವ್ರತವನ್ನು ಯಾವ ಕಾಲ, ಯಾವ ಮಾಸ, ಯಾವ ದಿನದಲ್ಲಿ ಹೇಗೆ ಮಾಡಬೇಕು ಹೇಳು" ಎಂದಳು. ಆಗ ಶಂಕರನು, "ಪಾರ್ವತಿಯೇ ನಿನ್ನ ಮನಸ್ಸಿನಲ್ಲಿ ವ್ರತಮಾಡುವ ಇಚ್ಛೆ ಇದ್ದರೆ ಯಾವ ಸ್ಥಳದಲ್ಲಿ ಮುನಿಗಳು ಇರುವರೋ, ಅಲ್ಲಿ ಹೋಗಿ ವ್ರತವನ್ನು ಮಾಡು" ಎಂದು ನುಡಿದನು. ಈಶ್ವರನ ಅನುಜ್ಞೆಯಿಂದ ಪಾರ್ವತಿಯು ಭೂತಲಕ್ಕೆ ಬರುವವಳಾಗಿ ಗಂಗಾತೀರದಲ್ಲಿದ್ದ ಮುನಿವೃಂದವನ್ನು ನೋಡಿದಳು. ಮುನಿಗಳಿಗೆ ನಮಸ್ಕರಿಸಿ, ಶಿವನ ಆದೇಶವನ್ನು ಹೇಳಿದಳು.

ದೇವಿಯ ಮಾತನ್ನು ಕೇಳಿ ಹರ್ಷಿತರಾದ ಋಷಿಗಳು "ಹೇ ದೇವಿ ಪಾರ್ವತಿಯೇ, ನೀನು ಬಹಳ ಉತ್ತಮ ಪ್ರಶ್ನೆ ಮಾಡಿದೆ. ಈ ವ್ರತವು ಇಹದಲ್ಲಿ ಸೌಖ್ಯವನ್ನು, ಪರದಲ್ಲಿ ಮುಕ್ತಿಯನ್ನೂ ಕೊಡುವುದು. ಲೋಕೋಪಕಾರಕ್ಕಾಗಿ ನಿನ್ನೆದುರಿಗೆ ಹೇಳುತ್ತೇವೆ" ಎಂದು ವ್ರತ ಮಾಡುವ ವಿಧಾನವನ್ನು ಹೇಳಲು ಪ್ರಾರಂಭಿಸಿದರು. "ವರ್ಷಾಕಾಲದಲ್ಲಿ ಭಾದ್ರಪದಮಾಸದ ಶುಕ್ಲಪಕ್ಷ ಶುಭದಿನದಲ್ಲಿ ಯಾವ ದಿನ ಜ್ಯೇಷ್ಠಾನಕ್ಷತ್ರ ಇರುವುದೋ ಆ ದಿವಸದಲ್ಲಿ ಈ ಜ್ಯೇಷ್ಠಾವ್ರತವನ್ನು ಮಾಡಬೇಕು. ಅಷ್ಟಮೀ ದಿವಸ ಜ್ಯೇಷ್ಠಾನಕ್ಷತ್ರ

ಪ್ರಾಪ್ತವಾದರೆ ಬಹಳ ಉತ್ತಮವೆಂದು ಬಲ್ಲವರು ಹೇಳುತ್ತಾರೆ. ಜ್ಯೇಷ್ಠಾನಕ್ಷತ್ರವು ಅಷ್ಟಮೀ ದಿವಸ ಇರದೇ ಬೇರೇ ದಿವಸದಲ್ಲಿ ಇದ್ದರೆ, ಯಾವ ದಿವಸ ಜ್ಯೇಷ್ಠಾನಕ್ಷತ್ರವು ಸೂರ್ಯೋದಯದಿಂದ ಮಧ್ಯಾಹ್ನದ ಮೇಲೆ ಇರುವುದೋ ಆ ದಿವಸ ಈ ಶುಭಕರವಾದ ವ್ರತವನ್ನು ಮಾಡಬೇಕು. ಅನುರಾಧಾ ನಕ್ಷತ್ರದ ಮೇಲೆ ಪೂಜೆ ಮಾಡಿ, ದೇವಿಗೆ ನಮಸ್ಕರಿಸಿ, ಮೂಲಾನಕ್ಷತ್ರದ ಮೇಲೆ ವಿಸರ್ಜನೆ ಮಾಡಬೇಕು. ಜ್ಯೇಷ್ಠಾಗೌರಿಯನ್ನು ಬಂಗಾರದ ಅಥವಾ ಬೆಳ್ಳಿಯ ಅಥವಾ ತಾಮ್ರದ, ಕೊನೆಗೆ ಮಣ್ಣಿನ ಕೊಡವನ್ನು ಮುಚ್ಚಳಿಕೆಯ ಸಹಿತ ತಂದು ಶುಭೋದಕದಿಂದ ತೊಳೆದು, ಕೊಡದ ಮುಖದಲ್ಲಿ ಶಂಖ-ಚಕ್ರಾದಿಗಳನ್ನು ಬರೆದು, ಮನೆಯಲ್ಲಿ ಈಶಾನ್ಯ ಮೂಲೆಯಲ್ಲಿ ದೇವರ ಮನೆಯ ಸಮೀಪದಲ್ಲಿ ಅಕ್ಕಿಯ ರಾಶಿಯ ಮೇಲೆ ಸ್ಥಾಪನೆ ಮಾಡಬೇಕು. 'ದೇವಾಧಿದೇವತೆಗಳಿಗೂ ಹಿರಿಯಳಾದಂಥವಳೇ ಹೇ ಜ್ಯೇಷ್ಠಾದೇವಿಯೇ ಜೀವಿಗಳಿಗೆ ಅನ್ನ ಕೊಡುವವಳೇ ನನ್ನ ಮನೆಯಲ್ಲಿ ಸ್ಥಿರವಾಗಿ ನಿಲ್ಲು. ಆಯುಷ್ಯವನ್ನೂ, ಆರೋಗ್ಯವನ್ನೂ, ಅನ್ನವಸ್ತ್ರಗಳನ್ನೂ ಮತ್ತು ನನ್ನ ಪತಿಗೆ ಸಂತತಿಯನ್ನೂ, ಯಾವಾಗಲೂ ಸುಖವನ್ನೂ ಕೊಡುವವಳಾಗು. ಹೇ ಆದಿಶಕ್ತಿಯೇ, ನಿನಗೆ ನಮಸ್ಕಾರ. ಹೇ ವಿಷ್ಣುಪ್ರಿಯಳೇ, ನಿನಗೆ ನಮಸ್ಕಾರ. ಹೇ ಬ್ರಹ್ಮಮಾತೇ ನಿನಗೆ ನಮಸ್ಕಾರ, ಜ್ಯೇಷ್ಠಾದೇವಿಯೇ ನಿನಗೆ ನಮಸ್ಕಾರ' ಈ ಪ್ರಕಾರ ಸ್ತೋತ್ರಮಾಡಿ, ಹದಿನಾರು ಎಳೆಗಳಿಂದ ಕೂಡಿದ ಮೂವತ್ತಾರು ಅಂಗುಲ ಉದ್ದವಿರುವ ದೋರವನ್ನು ದೇವಿಯ ಕುಂಭದ ಮೇಲೆ ಏರಿಸಬೇಕು. ಹೇ ಪಾರ್ವತಿಯೇ ಕೇಳು, ಈ ಪ್ರಕಾರ ಜ್ಯೇಷ್ಠಾದೇವಿಯ ಆವಾಹನವು ಹೇಳಲ್ಪಟ್ಟಿತು. ಆಮೇಲೆ ಮರುದಿನ ಸರ್ವಸುವಾಸಿನಿಯರು ಅಭ್ಯಂಗಸ್ನಾನವನ್ನು ಮಾಡಿಕೊಂಡು ಪೀತಾಂಬರಗಳನ್ನುಟ್ಟುಕೊಂಡು ಹರಿದ್ರಾಕುಂಕುಮದಿಂದಲಂಕೃತರಾಗಿ ಯಾರು ಜ್ಯೇಷ್ಠಾಗೌರಿಯನ್ನು ಪೂಜಿಸುತ್ತಾರೋ ಅವರ ಮನೆಯಲ್ಲಿ ಲಕ್ಷ್ಮೀದೇವಿಯು ಸದಾ ವಾಸಮಾಡಿಕೊಂಡಿರುತ್ತಾಳೆ. ಸುವಾಸಿನಿಯರಿಗೆ ಅಪೂಪಗಳನ್ನು ಕೊಟ್ಟು ಬ್ರಾಹ್ಮಣ ಮತ್ತು ಸುವಾಸಿನಿಯರನ್ನು ಭೋಜನ ಮಾಡಿಸಬೇಕು.

ಮರುದಿನ ಪುನಃ ದೇವಿಯನ್ನು ಪೂಜಿಸಿ, ಗೌರಿಯ ಮೇಲೆ ಏರಿಸಿದ ದೋರವನ್ನು ತೆಗೆದುಕೊಂಡು ಹದಿನಾರು ಗ್ರಂಥಿಗಳನ್ನು ಹಾಕಿ ಕುಂಕುಮವನ್ನು ಹಚ್ಚಿ, ಈ ಕಥೆಯನ್ನು ಕೇಳಿ ದೋರವನ್ನು ಧಾರಣ ಮಾಡಬೇಕು. ಆದಿಯಲ್ಲಿ, ಮಧ್ಯದಲ್ಲಿ ಅಥವಾ ಕೊನೆಯಲ್ಲಿ ಉದ್ಯಾಪನೆಯನ್ನು ಮಾಡಬೇಕು. ಪ್ರಥಮದಲ್ಲಿ ವಸ್ತ್ರಾಲಂಕಾರಭೂಷಣಗಳಿಂದ ಆಚಾರ್ಯನನ್ನು ಪೂಜೆ ಮಾಡಬೇಕು. ಯಾರು ಯಾವುದನ್ನು ಅಪೇಕ್ಷಿಸುವರೋ ಅಂಥ ಅಪೇಕ್ಷೆಯು ಅವರಿಗೆ ಪೂರ್ಣವಾಗುತ್ತದೆ. ಹೇ ಪಾರ್ವತಿಯೇ, ನೀನು ಜನರ ಉಪಕಾರಕ್ಕಾಗಿಯೇ ಪ್ರಶ್ನೆಯನ್ನು ಮಾಡಿರುವಿ" ಹೀಗೆಂದ ಋಷಿಗಳ ಮಾತುಗಳನ್ನು ಕೇಳಿ ಪಾರ್ವತಿಯು "ಹೇ! ಋಷಿಗಳಿರಾ, ಪೂರ್ವದಲ್ಲಿ ಈ ವ್ರತವನ್ನು ಯಾರು ಮಾಡಿದರು? ಅವರಿಗೆ ಯಾವ ಫಲವು ಪ್ರಾಪ್ತವಾಯಿತು? ಇದನ್ನು ಸತ್ಯವಾಗಿ ಹೇಳಿರಿ" ಎಂದು ಕೇಳಿದಳು.

ಅದಕ್ಕೆ ಋಷಿಗಳು, "ಪೂರ್ವದಲ್ಲಿ ವೇದಶಾಸ್ತ್ರಗಳನ್ನು ಬಲ್ಲಂಥ ಸ್ವಧರ್ಮದಲ್ಲಿ ಆಸಕ್ತನಾದ, ಯಾವಾಗಲೂ ಶುದ್ಧವಾದ ಮನಸ್ಸುಳ್ಳ ಶುಚಿರ್ಭೂತನಾದ ಸುಭದ್ರ ಎಂಬ ಹೆಸರಿನ ಬ್ರಾಹ್ಮಣನು ಜಯವರ್ಧನವೆಂಬ ಪಟ್ಟಣದಲ್ಲಿ ವಾಸ ಮಾಡಿಕೊಂಡು ಇದ್ದನು. ಅವನ ಹೆಂಡತಿಯಾದರೂ ಪತಿವ್ರತಾಧರ್ಮದಿಂದ ಯುಕ್ತಳಾಗಿ ಸುವ್ರತೀ ಎಂಬ ಹೆಸರುಳ್ಳವಳಾಗಿ ಮನೆಯ ಕೆಲಸಗಳನ್ನು ಮಾಡಿಕೊಂಡಿದ್ದಳು. ಕಾಲಾಂತರದಲ್ಲಿ ದಾರಿದ್ರ್ಯದಿಂದ ಪೀಡಿತಳಾಗಿ ಬಹಳ ದುಃಖಿತಳಾದಳು. ಅವಳು ಒಂದು ದಿನ ತನ್ನ ಪತಿಯ ಹತ್ತಿರ ಬಂದು, 'ಹೇ ಸ್ವಾಮೀ! ನಮಗೆ ಅನ್ನ-ವಸ್ತ್ರಗಳು ಇಲ್ಲವೇ ಇಲ್ಲ. ಆದ್ದರಿಂದ ಗ್ರಾಮವನ್ನು ಬಿಟ್ಟು, ಅರಣ್ಯಕ್ಕೆ ಹೋಗೋಣ' ಎಂದು ನುಡಿದಳು. ಹೀಗೆಂದ ತನ್ನ ಹೆಂಡತಿಯ ಮಾತನ್ನು ಕೇಳಿ, ಅವಳೊಡನೆ ಅರಣ್ಯಕ್ಕೆ ಹೊರಟನು. ಆಮೇಲೆ ಘೋರಾರಣ್ಯದಲ್ಲಿ ಹೋಗುತ್ತಾ ನಿರ್ಜನವಾದ ಪಾಪನಾಶ ಮಾಡುವ ದೊಡ್ಡ ನದಿಯನ್ನು ನೋಡಿದನು. ಮಧ್ಯಾಹ್ನದ ಸಮಯವು ಪ್ರಾಪ್ತವಾಗಲು ಆ ಬ್ರಾಹ್ಮಣನು ಸ್ನಾನ ಮಾಡಲು ಇಚ್ಛಿಸಿದನು. ಆ ಸ್ತ್ರೀಯಳಾದರೂ ದೂರದಲ್ಲಿ ನೋಡುತ್ತಿರಲು, ಜನಸಮೂಹವೆಂದು ತಿಳಿದು ಅದನ್ನು ನೋಡಲು ಆ ಕಡೆಗೆ ಹೋದಳು! ಅಲ್ಲಿ ನದೀ ದಂಡೆಯಲ್ಲಿ ಸ್ತ್ರೀಸಮೂಹವನ್ನು ನೋಡಿ ದೇವಿಯನ್ನು ಪೂಜಿಸುತ್ತಿರುವ ಸ್ತ್ರೀಸಮೂಹವನ್ನು ಅಭಿನಂದಿಸಿ ಪ್ರಶ್ನೆ ಮಾಡಿದಳು. 'ಇದು ಯಾವ ಶ್ರೇಷ್ಠ ವ್ರತವು? ಇದರ ಹೆಸರೇನು?' ಎಂದಳು.

ಆಗ್ಗ ಆ ಸ್ತ್ರೀಯರು, 'ಜ್ಯೇಷ್ಠಾಲಕ್ಷ್ಮೀ ನಾಮಕವಾದ ವ್ರತವಿದು. ಹೇ ಶುಭಾನನೇ! ನೀನೂ ಮಾಡುವವಳಾಗು. ಸ್ತ್ರೀಯರಿಗೆ ಸೌಭಾಗ್ಯವನ್ನು, ಸದ್ಯಃಕಾಲದಲ್ಲಿ ಫಲವನ್ನು ಕೊಡುವಂಥಾದ್ದು'. ಹೀಗೆ ಹೇಳಿದ ಅವರ ಮಾತನ್ನು ಕೇಳಿ, ಆ ಸ್ತ್ರೀಯು ವ್ರತವನ್ನು ಮಾಡಲು ಉದ್ಯುಕ್ತಳಾಗಿ ವ್ರತ ಮಾಡಿಸುವ ಬ್ರಾಹ್ಮಣನನ್ನು ಕುರಿತು ಪ್ರಶ್ನೆ ಮಾಡಿದಳು, 'ಹೇ ಮುನಿಯೇ! ಬಡತನದ ಬವಣೆಯಿಂದ ಪೀಡಿತಳಾಗಿ ಕೇಳಬೇಕೆನ್ನುತ್ತೇನೆ. ಈ ವ್ರತವನ್ನು ಹೇಗೆ ಮಾಡಬೇಕೆನ್ನುವ ವಿಧಾನವನ್ನೆಲ್ಲವನ್ನೂ ಸವಿಸ್ತಾರವಾಗಿ ಹೇಳು. ನಾನು ಅಪತ್ಯರಹಿತಳು, ಐಶ್ವರ್ಯಹೀನಳು ಪತಿಸಹಿತವಾಗಿ ಇಲ್ಲಿಗೆ ಬಂದಿದ್ದೇನೆ'. ಹೀಗೆಂದ ಆ ಸ್ತ್ರೀಯ ಮಾತನ್ನು ಕೇಳಿ ವಸಿಷ್ಠ ಮುನಿಯು, 'ಹೇ ಸ್ತ್ರೀಯಳೇ! ಹೇಳುತ್ತೇನೆ ಕೇಳು - ಈ ವ್ರತವು ಎಲ್ಲ ವ್ರತಗಳಲ್ಲಿ ಶ್ರೇಷ್ಠವಾದದ್ದು. ಜ್ಯೇಷ್ಠಾದೇವೀ ನಾಮಕವಾದ ಈ ವ್ರತವನ್ನು ಈಗಿನಿಂದಲೇ ನೀನು ಮಾಡುವವಳಾಗು. ಸುಖವನ್ನು ಹೊಂದುತ್ತೀ. ಭಾದ್ರಪದಮಾಸದ ಶುಕ್ಲಪಕ್ಷದಲ್ಲಿ ಯಾವ ದಿನ ಜ್ಯೇಷ್ಠಾನಕ್ಷತ್ರ ಇರುವುದೋ ಆ ದಿನ ಜ್ಯೇಷ್ಠಾಲಕ್ಷ್ಮಿಯನ್ನು ಪೂಜಿಸಬೇಕು. ಆ ದಿನದ ಪೂರ್ವದಲ್ಲಿ ಅನುರಾಧಾ ನಕ್ಷತ್ರದ ಮೇಲೆ ದೇವಿಯನ್ನು ಆವಾಹನ ಮಾಡಬೇಕು. ಪೂರ್ವೋಕ್ತ ವಿಧಾನದಿಂದ ಜ್ಯೇಷ್ಠಾಲಕ್ಷ್ಮಿಯನ್ನು ಪೂಜಿಸಬೇಕು. ಮರುದಿನ ಮೂಲಾನಕ್ಷತ್ರದ ಮೇಲೆ ಪೂಜಿಸಿ, ಹದಿನಾರು ಎಳೆಗಳಿಂದ ಯುಕ್ತವಾದ ಕುಂಕುಮಾಕ್ತವಾದ ದೋರವನ್ನು ಗೌರಿಯ ಕುಂಭದ ಮೇಲೆ ಏರಿಸಬೇಕು ಹಾಗೂ ತಮ್ಮ

ಯೋಗ್ಯತಾನುಸಾರವಾಗಿ ಯಥೋಕ್ತವಾಗಿ ಪೂಜಿಸಿ, ದೋರವನ್ನು ತೆಗೆದುಕೊಳ್ಳಬೇಕು. ನಂತರ, ಈ ಕಥೆಯನ್ನು ಕೇಳಿ, ಬ್ರಾಹ್ಮಣ-ಸುವಾಸಿನಿಯರಿಗೆ ಭೋಜನ ಮಾಡಿಸಿ, ದೋರವನ್ನು ಕಟ್ಟಿಕೊಳ್ಳಬೇಕು. ಹೀಗೆ ಯಾವ ಸ್ತ್ರೀಯು ಮಾಡುವಳೋ ಅವಳು ನಿಶ್ಚಯವಾಗಿ ಸರ್ವಸೌಖ್ಯವನ್ನು ಹೊಂದುತ್ತಾಳೆ.' ಈ ಪ್ರಕಾರ ಋಷಿಯು ಹೇಳಿದ ಮಾತನ್ನು ಕೇಳಿ, ಆಕೆಯು ಆ ವ್ರತವನ್ನು ಮಾಡುವವಳಾದಳು. ಆಮೇಲೆ ಪತಿಯು ಇರುವ ಸ್ಥಳಕ್ಕೆ ಹೋಗಿ ನೋಡಲಾಗಿ ಅಲ್ಲಿ ದಿವ್ಯವಾದ ಪಟ್ಟಣವನ್ನು ಅದರ ನಡುವೆ ಧನ-ಧಾನ್ಯದಿಂದಲೂ, ಸಂಪತ್ತಿನಿಂದಲೂ ತುಂಬಿದ ಒಳ್ಳೇ ಲಕ್ಷಣವಾಗಿರುವ ಮನೆಯನ್ನು ನೋಡಿದಳು. ಮನೆಯಲ್ಲಿ ತಾನೇ ಸ್ವತಃ ಲಕ್ಷ್ಮಿಯಂತೆ ತೋರುತ್ತಿದ್ದಳು. ಆ ಬ್ರಾಹ್ಮಣನು ಇದೆಲ್ಲವನ್ನು ನೋಡಿ, ಚಕಿತನಾಗಿ ಪತ್ನಿಯನ್ನು 'ಈ ಪ್ರಕಾರ ವೈಭವವು ಯಾರ ಪುಣ್ಯದಿಂದ ಪ್ರಾಪ್ತವಾಯಿತು?' ಹೀಗೆ ಸಂತೋಷದಿಂದ ಪತ್ನೀಸಮೇತನಾಗಿ ಮಧ್ಯಾಹ್ನಕಾಲವಾದ್ದರಿಂದ ಪಾಕಾದಿಗಳನ್ನು ಮಾಡಿ, ದೇವಪೂಜಾ ಮತ್ತು ವೈಶ್ವದೇವನನ್ನು ಮಾಡಿದನು. ಆ ವೇಳೆಯಲ್ಲಿ ಬಂದ ಬ್ರಾಹ್ಮಣರನ್ನು ನೋಡಿ, ಭೋಜನ ಮಾಡಿಸಿ, ಪತ್ನಿಯನ್ನು ಕೇಳಿದನು - 'ಹೇ ಭಾಗ್ಯಶಾಲಿನಿಯೇ! ಇದೆಲ್ಲ ಐಶ್ವರ್ಯವು ಯಾರಿಂದ ಪ್ರಾಪ್ತವಾಯಿತು?' ಹೀಗೆ ಕೇಳಿದ ಪತಿಯ ಮಾತನ್ನು ಕೇಳಿಯೂ ಸುಮ್ಮನೇ ಇದ್ದು ಆಮೇಲೆ ಹೇಳಿದಳು - 'ವಸಿಷ್ಠ ಋಷಿಗಳಿಂದ ಉಪದಿಷ್ಟವಾದ '**ಜ್ಯೇಷ್ಠಾದೇವೀವ್ರತ**'ವನ್ನು ಮಾಡಿದೆನು. ಆ ವ್ರತದ ಪ್ರಭಾವದಿಂದ ನಿನ್ನ ಮನೆಯು ಸಮೃದ್ಧವಾಗಿದೆ'. ಬ್ರಾಹ್ಮಣನು ಈ ಮಾತನ್ನು ಕೇಳಿ, ಬಂದ ಅತಿಥಿಗಳ ಭೋಜನ ಮಾಡಿಸಿ, ತಾನೂ ಉಂಡು ಆಮೇಲೆ ಪತ್ನಿಗೂ ಉಣಿಸಿದನು. ಆಮೇಲೆ ಮಹಾಲಕ್ಷ್ಮೀ ಕೃಪೆಯಿಂದ ಅವನಿಗೆ ಮಗನು ಹುಟ್ಟಿದನು. ಹೀಗೆ ಶುಭಕರವಾದ ಈ ಪೂರ್ವೇತಿಹಾಸವು ಹೇಳಲ್ಪಟ್ಟಿತು ಮತ್ತು ಶೌನಕಾದಿ ಮುನಿಗಳಿಂದಲೂ, ಎಲ್ಲ ತಪೋಧನರಿಂದಲೂ, ಪಾರ್ವತೀದೇವಿಯಿಂದಲೂ ಆ ಜ್ಯೇಷ್ಠಾದೇವೀ ವ್ರತವು ಪ್ರಸಾರ ಮಾಡಲ್ಪಟ್ಟಿತು. ಸ್ತ್ರೀಯರಿಗೆ ಈ ವ್ರತದಿಂದ ಸಕಲ ಸೌಖ್ಯಗಳೂ ಪ್ರಾಪ್ತವಾಗುತ್ತವೆ. ಆದ್ದರಿಂದ ಸರ್ವಪ್ರಯತ್ನದಿಂದ ಈ ವ್ರತವು ಮಾಡಲ್ಪಡಬೇಕು. ಯಾವ ಸುವಾಸಿನಿಯು ಈ ವ್ರತವನ್ನು ಪ್ರತಿವರ್ಷ ಮಾಡುತ್ತಾಳೋ ಅವಳು ಇಹದಲ್ಲಿ ಪತಿ-ಪುತ್ರಯುತಳಾಗಿ ಸರ್ವಸುಖಗಳನ್ನೂ, ಮನೋರಥಗಳನ್ನೂ ಅನುಭವಿಸಿ ಉತ್ತಮವಾದ ಗತಿಯನ್ನು ಹೊಂದುತ್ತಾಳೆ. ಯಾರು ಈ ಕಥೆಯನ್ನು ಭಕ್ತಿಯಿಂದ ಕೇಳುತ್ತಾರೋ, ಯಾರು ಈ ಕಥೆಯನ್ನು ಹೇಳುತ್ತಾರೋ ಅವರೆಲ್ಲರೂ ಜ್ಯೇಷ್ಠಾದೇವೀ ಕೃಪೆಗೆ ಪಾತ್ರರಾಗುವರು" ಈ ಪ್ರಕಾರವಾಗಿ ಈ ವ್ರತದ ಮಹಿಮೆಯನ್ನು ಸೂತಮುನಿಗಳು ಶೌನಕಾದಿಗಳಿಗೆ ಹೇಳಿದರು.

॥ ಇತಿ ಜ್ಯೇಷ್ಠಾದೇವೀವ್ರತಕಥಾ ಸಂಪೂರ್ಣಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥



# ॥ ಶ್ರೀಅನಂತಚತುರ್ದಶೀ ॥

## (ಭಾದ್ರಪದಮಾಸ ಶುಕ್ಲಪಕ್ಷ ಚತುರ್ದಶೀ)

**ದೇವತಾಸ್ಮರಣಮ್ ।**

ಶ್ರೀಗುರುಭ್ಯೋ ನಮಃ, ಹರಿಃ ಓಂ ।

1. ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

2. ಓಂ ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ ।
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ಮಂಗಲಂ ॥

**ದೀಪಪ್ರಜ್ವಲನಮ್ ।**

ಓಂ ॥ ಅಗ್ನಿನಾಗ್ನಿಸ್ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ ಜುಹ್ವಾಸ್ಯಃ ॥
(ಹೀಗೆ ಹೇಳುತ್ತಾ ದೀಪಗಳನ್ನು ಹಚ್ಚಬೇಕು)

**ಭೂತೋಚ್ಚಾಟನಮ್ ।**

'ಅಪಸರ್ಪಂತು ಯೇ ಭೂತಾಃ ಯೇ ಭೂತಾ ಭುವಿ ಸಂಸ್ಥಿತಾಃ ।
ಯೇ ಭೂತಾ ವಿಘ್ನಕರ್ತಾರಸ್ತೇ ನಶ್ಯಂತು ಶಿವಾಜ್ಞಯಾ ॥

ಅಪಕ್ರಾಮಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ।
ಯೇ ಚಾತ್ರ ನಿವಸಂತ್ಯೇವ ದೇವತಾಭುವಿ ಸಂತತಮ್ ।
ತೇಷಾಮಪ್ಯವಿರೋಧೇನ ಬ್ರಹ್ಮಕರ್ಮ ಸಮಾರಭೇ ॥'

ಇತಿ ಛೋಟಿಕಾಮುದ್ರಯಾ ಸಮಸ್ತ ಭೂತಾನ್ಯುಚ್ಚಾಟ್ಯ,
ನಾರಾಚಮುದ್ರಯಾ ದಿಶೋ ಬಧ್ನೀಯಾತ್ ॥

**ಘಂಟಾವಾದನಮ್ ।**

ಆಗಮಾರ್ಥಂ ತು ದೇವಾನಾಂ, ಗಮನಾರ್ಥಂ ತು ರಕ್ಷಸಾಂ ।
ಕುರು ಘಂಟಾರವಂ ತತ್ರ, ದೇವತಾಹ್ವಾನಲಾಂಛನಂ ॥
(ಈ ಮಂತ್ರವನ್ನು ಹೇಳುತ್ತಾ ಗಂಟೆ ಬಾರಿಸಬೇಕು)

ದ್ವಿರಾಚಮ್ಯ, ಪ್ರಾಣಾನಾಯಮ್ಯ ।

(ಎರಡು ಬಾರಿ ಆಚಮನ ಮಾಡಿ, ಪ್ರಾಣಾಯಾಮವನ್ನು ಮಾಡಿ. ಎಡಗೈಯಲ್ಲಿ ಮಂತ್ರಾಕ್ಷತೆ ಇಟ್ಟುಕೊಂಡು ಬಲಗೈಯಿಂದ ಮುಚ್ಚಿ, ಬಲತೊಡೆಯ ಮೇಲೆ ಕೈಗಳನ್ನಿಟ್ಟು-ಕೊಂಡು ಸಂಕಲ್ಪ ಮಾಡಬೇಕು)

**ಸಂಕಲ್ಪಃ ।**

ಶುಭೇ ಶೋಭನೇ ಮುಹೂರ್ತೇ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ರೀಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ ಕಲಿಯುಗೇ ಪ್ರಥಮಪಾದೇ ಭರತವರ್ಷೇ ಭರತಖಂಡೇ ಜಂಬೂದ್ವೀಪೇ ದಂಡಕಾರಣ್ಯೇ ಗೋದಾವರ್ಯಾಃ ದಕ್ಷಿಣೇ ಪಾರ್ಶ್ವೇ ಶಾಲಿವಾಹನಶಕೇ ಬೌದ್ಧಾವತಾರೇ ರಾಮಕ್ಷೇತ್ರೇ ಅಸ್ಮಿನ್ವರ್ತಮಾನೇ ಚಾಂದ್ರಮಾನೇನ.......... ಸಂವತ್ಸರೇ ದಕ್ಷಿಣಾಯನೇ ವರ್ಷಋತೌ ಭಾದ್ರಪದಮಾಸೇ ಶುಕ್ಲಪಕ್ಷೇ ಚತುರ್ದಶ್ಯಾಂ ಶುಭತಿಥೌ ...........ವಾಸರೇ ...........ಯೋಗೇ ...........ಕರಣೇ ಏವಂಗುಣವಿಶೇಷಣವಿಶಿಷ್ಟಾಯಾಂ ಶುಭತಿಥೌ ಅಸ್ಮಾಕಂ ಸಕುಟುಂಬಾನಾಂ ಕ್ಷೇಮ-ಸ್ಥೈರ್ಯ-ವಿಜಯ-ವೀರ್ಯ-ಆಯುಃ-ಆರೋಗ್ಯ-ಐಶ್ವರ್ಯಾಭಿ-ವೃದ್ಧ್ಯರ್ಥಂ, ಧರ್ಮಾರ್ಥಕಾಮಮೋಕ್ಷಾಖ್ಯಚತುರ್ವಿಧಪುರುಷಾರ್ಥಸಿದ್ಧ್ಯರ್ಥಂ, ಸತ್ಸಂತಾನ-ಪ್ರಾಪ್ತ್ಯರ್ಥಂ, ಜ್ಞಾನ-ಭಕ್ತಿ-ವೈರಾಗ್ಯಸಿದ್ಧ್ಯರ್ಥಂ, ಶ್ರೀಮದ್ರಾಘವೇಂದ್ರ- ತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಅನಂತಪದ್ಮನಾಭಪ್ರೇರಣಯಾ ಶ್ರೀಅನಂತಪದ್ಮನಾಭ-ಪ್ರೀತ್ಯರ್ಥಂ ಭಗವತೋ ಬಲೇನ, ಭಗವತೋ ವೀರ್ಯೇಣ, ಭಗವತಸ್ತೇಜಸಾ, ಭಗವತಃ ಕರಣೇನ, ಭಗವತಃ ಕರ್ಮಣಾ ಯಥಾಶಕ್ತಿ ಸಂಪಾದಿತದ್ರವ್ಯೈಃ ಪುರುಷಸೂಕ್ತೇನ ಕಲ್ಪೋಕ್ತಮಂತ್ರೈಶ್ಚ ಧ್ಯಾನಾವಾಹನಾದಿ ಷೋಡಶೋಪಚಾರಪೂಜಾಂ ಕರಿಷ್ಯೇ ॥

(ಮಂತ್ರಾಕ್ಷತೆ, ಹೂವು, ತುಳಸಿ ಸಹಿತ ನೀರನ್ನು ಅರ್ಘ್ಯಪಾತ್ರೆಗೆ ಬಿಡಿ)

ಆದೌ ನಿರ್ವಿಘ್ನೇನ ವ್ರತಪರಿಸಮಾಪ್ತ್ಯರ್ಥಂ ಶ್ರೀಮನ್ಮಹಾಗಣಪತ್ಯಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀವಿಶ್ವಂಭರಪ್ರೇರಣಯಾ ಶ್ರೀವಿಶ್ವಂಭರ-ಪ್ರೀತ್ಯರ್ಥಂ ಮಹಾಗಣಪತೇಃ ಧ್ಯಾನಾವಾಹನಾದಿ ಷೋಡಶೋಪಚಾರಪೂಜಾಂ ಕರಿಷ್ಯೇ ॥

(ಮಂತ್ರಾಕ್ಷತೆ ಮತ್ತು ನೀರನ್ನು ಅರ್ಘ್ಯಪಾತ್ರೆಗೆ ಬಿಡಬೇಕು)

(ಸಕಲಕಾರ್ಯೋಪಯೋಗಿಯಾದ ಮಹಾಗಣಪತಿಪೂಜೆಗೆ .... ಪುಟ ನೋಡಿ)

**ಕಲಶಪೂಜಾ ।**

ಕಲಶಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಗಂಧಾಕ್ಷತೆ ಹಚ್ಚಿ ಅದರೊಳಗೆ ತುಳಸೀದಳ - ಬಿಡಿಹೂಗಳನ್ನು ಹಾಕಿಕೊಂಡು ಕಲಶದ ಮೇಲೆ ಬಲಗೈಯನ್ನಿಟ್ಟು ಕಲಶಪೂಜೆ ಮಾಡಬೇಕು.

ಈ ಕಲಶದ ನೀರನ್ನೇ ಪೂಜೆಗೆ ಉಪಯೋಗಿಸಬೇಕು. ಪಂಚಪಾತ್ರೆಯ ನೀರನ್ನು ಆಚಮನಕ್ಕೆ ಮಾತ್ರ ಉಪಯೋಗಿಸಬೇಕು.

ಓಂ ॥ ಆಕಲಶೇಷು ಧಾವತಿ ಪವಿತ್ರೇ ಪರಿಷಿಚ್ಯತೇ ।
ಉಕ್ಥೈರ್ಯಜ್ಞೇಷು ವರ್ಧತೇ ॥
ಕಲಶಂ ಗಂಧಾಕ್ಷತಾಪತ್ರಪುಷ್ಪೈರಭ್ಯರ್ಚ್ಯ ॥

ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಸ್ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥

ಕುಕ್ಷೌ ತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಸ್ಸಾಮವೇದೋ ಹ್ಯಥರ್ವಣಃ ॥

ಅಂಗೈಶ್ಚ ಸಹಿತಾಸ್ಸರ್ವೇ ಕಲಶಂ ತು ಸಮಾಶ್ರಿತಾಃ ।
ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ ॥

ಆಯಾಂತು ದೇವಪೂಜಾರ್ಥಮಭಿಷೇಕಾರ್ಥಸಿದ್ಧಯೇ ॥

ಓಂ ॥ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣಿಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

ನಿರ್ವಿಷೀಕರಣಾರ್ಥಂ ತಾರ್ಕ್ಷ್ಯಮುದ್ರಾಂ ಪ್ರದರ್ಶಯಾಮಿ । ಅಮೃತೀಕರಣಾರ್ಥಂ ಧೇನುಮುದ್ರಾಂ ಪ್ರದರ್ಶಯಾಮಿ । ಪವಿತ್ರೀಕರಣಾರ್ಥಂ ಶಂಖಮುದ್ರಾಂ ಪ್ರದರ್ಶಯಾಮಿ । ಸಂರಕ್ಷಣಾರ್ಥಂ ಚಕ್ರಮುದ್ರಾಂ ಪ್ರದರ್ಶಯಾಮಿ । ದಿಗ್ಬಂಧನಾರ್ಥಂ ಗದಾಮುದ್ರಾಂ ಪ್ರದರ್ಶಯಾಮಿ ॥ ಜಲಶೋಧನಾರ್ಥಂ ಪದ್ಮಮುದ್ರಾಂ ಪ್ರದರ್ಶಯಾಮಿ ॥ ಓಂ ನಮೋ ನಾರಾಯಣಾಯೇತಿ ಮೂಲಮಂತ್ರಮಷ್ಟವಾರಂ ಜಪಿತ್ವಾ ॥

(ಕಲಶಕ್ಕೆ ತಾರ್ಕ್ಷ್ಯಾದಿ ಮುದ್ರೆಗಳನ್ನು ತೋರಿಸಿ, ನಾರಾಯಣಾಷ್ಟಾಕ್ಷರದಿಂದ 8 ಬಾರಿ ಕಲಶವನ್ನು ಅಭಿಮಂತ್ರಿಸಿ, ಮುಂದಿನ ಶ್ಲೋಕಗಳನ್ನು ಪಠಿಸಬೇಕು)

ಏಕಪಂಚಾಶದ್ವರ್ಣಾನಾಂ ಚತುರ್ವಿಂಶತಿಮೂರ್ತಯಃ ।
ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯಕಚ್ಛಪೌ ॥
ಕೋಲೋನೃಸಿಂಹಃ ಸ ವಟುರ್ಜಾಮದಗ್ನ್ಯರಘೂದ್ವಹೌ ।
ವಾಸಿಷ್ಠಯಾದವೌ ಕೃಷ್ಣಾವಾತ್ರೇಯೌ ಬುದ್ಧಕಲ್ಕಿನೌ ॥

ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶದೇವತಾಃ ।
ಏತಾಭಿಃ ಸಹಿತಾಂ ಮೂಲಮೂರ್ತಿಂ ಕುಂಭೋದಕೇ ಸುಧೀಃ ॥

ಕಲಶಃ ಕೀರ್ತಿಮಾಯುಷ್ಯಂ ಪ್ರಜ್ಞಾಂ ಮೇಧಾಂ ಶ್ರಿಯಂ ಬಲಮ್ ।
ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಸಾಧಯೇತ್ ॥

ಸರ್ವತೀರ್ಥಮಯೋ ಯಸ್ಮಾತ್ಸರ್ವಕ್ಷೇತ್ರಮಯೋ ಯತಃ ।
ಅತೋ ಹರಿಪ್ರಿಯೋಽಸಿ ತ್ವಂ ಪೂರ್ಣಕುಂಭ ನಮೋಽಸ್ತು ತೇ ॥

ಕಲಶದೇವತಾಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀ-ನಾರಾಯಣಾಯ ನಮಃ, ಧ್ಯಾನಾದಿಷೋಡಶೋಪಚಾರಪೂಜಾಂ ಸಮರ್ಪಯಾಮಿ ॥

'ಓಂ ನಮೋ ನಾರಾಯಣಾಯ' ಎಂದು ಅಷ್ಟಾಕ್ಷರಮಂತ್ರದಿಂದ ಕಲಶದ ನೀರನ್ನು 8-12 ಬಾರಿ ಅಭಿಮಂತ್ರಿಸಿ, ಉದ್ಧರಣೆಯಿಂದ ಆ ನೀರನ್ನು ಎಡಗೈಯಲ್ಲಿ ಹಿಡಿದುಕೊಂಡು ಬಲಗೈಯಲ್ಲಿ ತುಳಸೀದಳ ಅಥವಾ ಬಿಡಿಹೂವೊಂದನ್ನು ಹಿಡಿದುಕೊಂಡು, ಆ ನೀರನ್ನು ಪೂಜಾಸಾಮಗ್ರಿಗಳಿಗೆಲ್ಲಾ ಪ್ರೋಕ್ಷಿಸಿ, ಕೊನೆಗೆ ತನಗೂ ಪ್ರೋಕ್ಷಿಸಿಕೊಂಡು ಉಳಿದ ನೀರನ್ನು ಮತ್ತು ಕೈಯಲ್ಲಿರುವ ತುಳಸೀ / ಹೂವನ್ನು ಅರ್ಘ್ಯಪಾತ್ರೆಗೆ ಹಾಕಬೇಕು. ಪ್ರೋಕ್ಷಣೆ ಮಾಡಿಕೊಳ್ಳುವಾಗ "ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ । ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥" ಎಂಬ ಮಂತ್ರವನ್ನು ಹೇಳಬೇಕು.

**ಶಂಖಪೂಜಾ ।**

'ಓಂ ರಂ ಸಹಸ್ರಾರ ಹುಂ ಫಟ್' ಎಂಬ ಮಂತ್ರದಿಂದ ಶಂಖವನ್ನು ಮೀಸಲು ನೀರಿನಿಂದ ತೊಳೆದು, ಶಂಖದೊಳಗೆ ಕಲಶದ ನೀರನ್ನು ಹಾಕಿಕೊಂಡು, ಗಂಧಾಕ್ಷತೆ-ಯನ್ನು ಹಚ್ಚಿ, ತುಳಸೀದಳವನ್ನು ಇಟ್ಟು,

ಓಂ ॥ ಪಾಂಚಜನ್ಯಾಯ ವಿದ್ಮಹೇ ಮಹಾದರಾಯ ಧೀಮಹಿ ।
ತನ್ನೋ ಶಂಖಃ ಪ್ರಚೋದಯಾತ್ ॥
ಎಂದು ಶಂಖವನ್ನು ಮುಟ್ಟಿ ಮೂರು ಬಾರಿ ಜಪಿಸಬೇಕು. ನಂತರ,

ನಿರ್ವಿಷೀಕರಣಾರ್ಥಂ ತಾರ್ಕ್ಷ್ಯಮುದ್ರಾಂ ಪ್ರದರ್ಶಯಾಮಿ ।
ಅಮೃತೀಕರಣಾರ್ಥಂ ಧೇನುಮುದ್ರಾಂ ಪ್ರದರ್ಶಯಾಮಿ ।
ಪವಿತ್ರೀಕರಣಾರ್ಥಂ ಶಂಖಮುದ್ರಾಂ ಪ್ರದರ್ಶಯಾಮಿ ।
ಸಂರಕ್ಷಣಾರ್ಥಂ ಚಕ್ರಮುದ್ರಾಂ ಪ್ರದರ್ಶಯಾಮಿ ।
ದಿಗ್ಬಂಧನಾರ್ಥಂ ಗದಾಮುದ್ರಾಂ ಪ್ರದರ್ಶಯಾಮಿ ।
ಶುದ್ಧ್ಯರ್ಥಂ ಪದ್ಮಮುದ್ರಾಂ ಪ್ರದರ್ಶಯಾಮಿ ।
ಈ ಮುದ್ರೆಗಳನ್ನು ಶಂಖಕ್ಕೆ ತೋರಿಸಬೇಕು.

ತ್ವಂ ಪುರಾ ಸಾಗರೋತ್ಪನ್ನಃ ವಿಷ್ಣುನಾ ವಿಧೃತಃ ಕರೇ ।
ನಮಿತಃ ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತುತೇ ॥

ಗರ್ಭಾ ದೇವಾರಿನಾರಿಣಾಂ ವಿಶೀರ್ಯಂತೇ ಸಹಸ್ರಧಾ ।
ತವ ನಾದೇನ ಪಾತಾಲೇ ಪಾಂಚಜನ್ಯ ನಮೋಽಸ್ತು ತೇ ॥

ಪಾಂಚಜನ್ಯ ನಿಜಧ್ವಾನ ಧ್ವಸ್ತಪಾಪಕ ಸಂಚಯ ।
ಪಾಹಿ ಮಾಂ ಪಾಪಿನಂ ಘೋರಂ ಸಂಸಾರಾರ್ಣವಪಾತಿನಮ್ ॥

ದರ್ಶನಾದೇವ ಶಂಖಸ್ಯ ಕಿಂ ಪುನಃ ಸ್ಪರ್ಶನೇನ ಚ ।
ವಿಲಯಂ ಯಾಂತಿ ಪಾಪಾನಿ ಹಿಮವದ್ಭಾಸ್ಕರೋದಯೇ ॥

ನತ್ವಾ ಶಂಖಂ ಕರೇ ಧೃತ್ವಾ ಮಂತ್ರೇಣಾನೇನ ವೈಷ್ಣವಃ ।
ಯಃ ಸ್ನಾಪಯತಿ ಗೋವಿಂದಂ ತಸ್ಯ ಪುಣ್ಯಮನಂತಕಮ್ ॥

ಶಂಖಂ ಚಂದ್ರಾರ್ಕದೈವತ್ಯಂ ಮಧ್ಯೇ ವರುಣದೈವತಮ್ ।
ಪೃಷ್ಠೇ ಪ್ರಜಾಪತಿಸ್ತತ್ರ ಅಗ್ರೇ ಗಂಗಾ ಸರಸ್ವತೀ ॥

ತ್ರೈಲೋಕ್ಯೇ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ ।
ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾತ್ ಶಂಖಂ ಪ್ರಪೂಜಯೇತ್ ॥

(ಎಂದು ಪೂಜಿಸಿ, 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರ ಮಂತ್ರವನ್ನು 12 ಬಾರಿ ಜಪಿಸಿ, ಪೂಜಾದ್ರವ್ಯಗಳಿಗೂ ತನಗೂ ಶಂಖದೊಳಗಿನ ನೀರಿನಿಂದ ಮುಂದಿನ ಮಂತ್ರ ಹೇಳುತ್ತಾ ಪ್ರೋಕ್ಷಣೆ ಮಾಡಿಕೊಳ್ಳಬೇಕು)

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।
ಯಃ ಸ್ಮರೇತ್ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥

## ॥ ಯಮುನಾಪೂಜಾ ॥

ಶ್ರೀಮದನಂತಪೂಜಾಂಗ ಯಮುನಾಪೂಜಾಂ ಕರಿಷ್ಯೇ ।
(ಎಂದು ಮಂತ್ರಾಕ್ಷತೆ-ನೀರು ಬಿಡಬೇಕು)

**ಧ್ಯಾನಮ್ ।**

ಲೋಕಪಾಲಸ್ತುತಾಂ ದೇವೀಮಿಂದ್ರನೀಲಸಮಪ್ರಭಾಮ್ ।
ಯಮುನೇ ತ್ವಾಮಹಂ ಧ್ಯಾಯೇ ಸರ್ವಕಾಮಾರ್ಥಸಿದ್ಧಯೇ ॥
ಶ್ರೀಯಮುನಾಯೈ ನಮಃ । ಧ್ಯಾಯಾಮಿ । ಧ್ಯಾನಂ ಸಮರ್ಪಯಾಮಿ ॥
(ಮಂತ್ರಾಕ್ಷತೆಯನ್ನು ಯಮುನಾಕಲಶಕ್ಕೆ ಹಾಕಿ)

**ಆವಾಹನಮ್ ।**

ಓಂ ॥ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣ್ಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

ಸರಸ್ವತಿ ನಮಸ್ತುಭ್ಯಂ ಸರ್ವಕಾಮಪ್ರದಾಯಿನಿ ।
ಆಗಚ್ಛ ದೇವಿ ಯಮುನೇ ವ್ರತಸಂಪೂರ್ತಿಹೇತವೇ ॥
ಶ್ರೀಯಮುನಾಯೈ ನಮಃ । ಅಸ್ಮಿನ್ ಕಲಶೇ ಯಮುನಾಮಾವಾಹಯಾಮಿ ।
(ಮಂತ್ರಾಕ್ಷತೆಯನ್ನು ಯಮುನಾಕಲಶಕ್ಕೆ ಹಾಕಿ)

**ಆಸನಮ್ ।**

ಸಿಂಹಾಸನಸಮಾರೂಢೇ ದೇವಶಕ್ತಿಸಮನ್ವಿತೇ ।
ಸರ್ವಲಕ್ಷಣಸಂಪೂರ್ಣೇ ಯಮುನಾಯೈ ನಮೋಽಸ್ತು ತೇ ॥
ಶ್ರೀಯಮುನಾಯೈ ನಮಃ । ಆಸನಂ ಸಮರ್ಪಯಾಮಿ ॥
(ಯಮುನಾ ಕಲಶಕ್ಕೆ ಬಿಡಿ ಹೂ-ಅಕ್ಷತೆಗಳನ್ನು ಹಾಕಬೇಕು)

**ಪಾದ್ಯಮ್ ।**

ರುದ್ರಪಾದೇ ನಮಸ್ತುಭ್ಯಂ ಸರ್ವಲೋಕಹಿತಪ್ರಿಯೇ ।
ಸರ್ವಪಾಪಪ್ರಶಮನಿ ತರಂಗಿಣ್ಯೈ ನಮೋಽಸ್ತು ತೇ ॥
ಶ್ರೀಯಮುನಾಯೈ ನಮಃ । ಪಾದ್ಯಂ ಸಮರ್ಪಯಾಮಿ ॥
(ಶುದ್ಧೋದಕ ತೋರಿಸಿ ಅರ್ಘ್ಯಪಾತ್ರೆಗೆ ಹಾಕಿರಿ)

**ಅರ್ಘ್ಯಮ್ ।**

ತಾರ್ಕ್ಷ್ಯಪಾದೇ ನಮಸ್ತುಭ್ಯಂ ಶಂಕರಪ್ರಿಯಭಾಮಿನಿ ।
ಸರ್ವಕಾಮಪ್ರದೇ ದೇವಿ ಯಮುನೇ ತೇ ನಮೋ ನಮಃ ॥
ಶ್ರೀಯಮುನಾಯೈ ನಮಃ । ಅರ್ಘ್ಯಂ ಸಮರ್ಪಯಾಮಿ ॥
(ಉದ್ಧರಣೆಯಲ್ಲಿ ಶುದ್ಧೋದಕ ಮತ್ತು ಮಂತ್ರಾಕ್ಷತೆ ತೆಗೆದುಕೊಂಡು ಯಮುನೆಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಿ)

**ಆಚಮನಮ್ ।**

ವಿಷ್ಣುಪಾದೋದ್ಭವೇ ದೇವಿ ಸರ್ವಾಭರಣಭೂಷಿತೇ ।
ಕೃಷ್ಣಮೂರ್ತೇ ಮಹಾದೇವಿ ಕೃಷ್ಣವೇಣ್ಯೈ ನಮೋಽಸ್ತು ತೇ ॥
ಶ್ರೀಯಮುನಾಯೈ ನಮಃ । ಆಚಮನೀಯಂ ಸಮರ್ಪಯಾಮಿ ॥
(ಶುದ್ಧೋದಕ ತೋರಿಸಿ, ಅರ್ಘ್ಯಪಾತ್ರೆಗೆ ಬಿಡಿ)

**ಮಧುಪರ್ಕಃ ।**

ಸರ್ವಪಾಪಹರೇ ದೇವಿ ವಿಶ್ವಸ್ಯ ಪ್ರಿಯದರ್ಶಿನಿ ।
ಸೌಭಾಗ್ಯಂ ಯಮುನೇ ದೇಹಿ ಯಮುನಾಯೈ ನಮೋಽಸ್ತು ತೇ ॥
ಶ್ರೀಯಮುನಾಯೈ ನಮಃ । ಮಧುಪರ್ಕಂ ಸಮರ್ಪಯಾಮಿ ॥
(ಮೊಸರು, ತುಪ್ಪ, ಜೇನುತುಪ್ಪ ಇವುಗಳಲ್ಲಿ ಒಂದು ಹೂವನ್ನು ಅದ್ದಿ ಯಮುನಾಕಲಶಕ್ಕೆ ಹಾಕಿ)

**ಪಂಚಾಮೃತಸ್ನಾನಮ್ ।**

ನಂದಿಪಾದೇ ಮಹಾದೇವಿ ಶಂಕರಾರ್ಧಶರೀರಿಣಿ ।
ಸರ್ವಲೋಕಹಿತೇ ದೇವಿ ಭೀಮರಥ್ಯೈ ನಮೋಽಸ್ತು ತೇ ॥
ಶ್ರೀಯಮುನಾಯೈ ನಮಃ । ಪಂಚಾಮೃತಸ್ನಾನಂ ಸಮರ್ಪಯಾಮಿ ॥
(ಒಂದು ಹೂವನ್ನು ಪಂಚಾಮೃತ ದ್ರವ್ಯಗಳೊಳಗೆ ಅದ್ದಿ ಆ ಹೂವನ್ನು ಕಲಶದ ಮೇಲೆ ಹಾಕುವುದು)

**ಶುದ್ಧೋದಕಸ್ನಾನಮ್ ।**

ಸಿಂಹಪಾದೋದ್ಭವೇ ದೇವಿ ನಾರಸಿಂಹಸಮಪ್ರಭೇ ।
ಸರ್ವಲಕ್ಷಣಸಂಪೂರ್ಣೇ ಭವನಾಶಿನಿ ತೇ ನಮಃ ॥
ಶ್ರೀಯಮುನಾಯೈ ನಮಃ । ಶುದ್ಧೋದಕಸ್ನಾನಂ ಸಮರ್ಪಯಾಮಿ ॥ (ನೀರಿನಿಂದ ಪ್ರೋಕ್ಷಣೆ ಮಾಡುವುದು) ಸ್ನಾನಾನಂತರಂ ಆಚಮನೀಯಂ ಸಮರ್ಪಯಾಮಿ ॥
(ಉದ್ಧರಣೆ ನೀರನ್ನು ತೋರಿಸಿ ಪಾತ್ರೆಗೆ ಬಿಡಿ)

**ವಸ್ತ್ರಯುಗ್ಮಮ್ ।**

ವಿಷ್ಣುಪಾದಾಬ್ಜಸಂಭೂತೇ ಗಂಗೇ ತ್ರಿಪಥಗಾಮಿನಿ ।
ಸರ್ವಪಾಪಹರೇ ದೇವಿ ಭಾಗೀರಥ್ಯೈ ನಮೋಽಸ್ತು ತೇ ॥
ಶ್ರೀಯಮುನಾಯೈ ನಮಃ । ಶ್ವೇತವಸ್ತ್ರಯುಗ್ಮಂ ಸಮರ್ಪಯಾಮಿ ॥
(ಬಿಳಿಗೆಜ್ಜೆವಸ್ತ್ರವನ್ನು ಕಲಶಕ್ಕೆ ಹಾಕುವುದು)

**ಕಂಚುಕಮ್ ।**

ತ್ರ್ಯಂಬಕಸ್ಯ ಜಟೋದ್ಭೂತೇ ಗೌತಮಸ್ಯಾಘನಾಶಿನಿ ।
ಸಪ್ತಧಾ ಸಾಗರಂ ಯಾಸಿ ಗೋದಾವರಿ ನಮೋಽಸ್ತು ತೇ ॥
ಶ್ರೀಯಮುನಾಯೈ ನಮಃ । ಕಂಚುಕಂ ಸಮರ್ಪಯಾಮಿ ॥
(ರವಿಕೆಯನ್ನು ಸಮರ್ಪಿಸುವುದು)

**ಆಭರಣಮ್ ।**

ಸುವರ್ಣಭೂಷಿತಂ ದಿವ್ಯಂ ನಾನಾರತ್ನಸುಶೋಭಿತಮ್ ।
ತ್ರೈಲೋಕ್ಯಪೂಜಿತೇ ದೇವಿ ಗೃಹಾಣಾಭರಣಂ ಶುಭಮ್ ॥
ಶ್ರೀಯಮುನಾಯೈ ನಮಃ । ಆಭರಣಾನಿ ಸಮರ್ಪಯಾಮಿ ॥
ಆಭರಣಾರ್ಥೇ ಅಕ್ಷತಾನ್ ಸಮರ್ಪಯಾಮಿ ॥ (ಮಂತ್ರಾಕ್ಷತೆ ಹಾಕಿರಿ)

**ಗಂಧಃ ।**

ಕರ್ಪೂರಾಗರುಕಸ್ತೂರೀರೋಚನಾದಿಭಿರನ್ವಿತಮ್ ।
ಗಂಧಂ ದಾಸ್ಯಾಮ್ಯಹಂ ದೇವಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥
ಶ್ರೀಯಮುನಾಯೈ ನಮಃ । ಗಂಧಂ ಸಮರ್ಪಯಾಮಿ ॥
(ಹರಿನಿವೇದಿತ ಗಂಧವನ್ನು ಸಮರ್ಪಿಸಿ)

**ಅಕ್ಷತಾಃ ।**

ಶ್ವೇತಾಂಶ್ಚ ಚಂದ್ರವರ್ಣಾಭಾನ್ ಹರಿದ್ರಾರಾಗರಂಜಿತಾನ್ ।
ಅಕ್ಷತಾಂಶ್ಚ ಸರಿಚ್ಛ್ರೇಷ್ಠೇ ದದಾಮಿ ಯಮುನೇ ಶುಭೇ ॥
ಶ್ರೀಯಮುನಾಯೈ ನಮಃ । ಅಕ್ಷತಾನ್ ಸಮರ್ಪಯಾಮಿ ॥
(ಅಕ್ಷತೆಯನ್ನು ಹಾಕಿರಿ)

**ಮಂಗಲದ್ರವ್ಯಾಣಿ ।**

ಕಂಠಸೂತ್ರಂ ತಾಲಪತ್ರಂ ಹರಿದ್ರಾಕುಂಕುಮಾಂಜನಮ್ ।
ಸಿಂಧೂರಾದಿ ಪ್ರದಾಸ್ಯಾಮಿ ಸೌಭಾಗ್ಯಂ ದೇಹಿ ಮೇಽವ್ಯಯೇ ॥
ಶ್ರೀಯಮುನಾಯೈ ನಮಃ । ಸೌಭಾಗ್ಯದ್ರವ್ಯಾಣಿ ಸಮರ್ಪಯಾಮಿ ॥
(ಮಂಗಲಸೂತ್ರ, ತಾಳಪತ್ರ, ಅರಿಷಿಣ-ಕುಂಕುಮ, ಕಾಡಿಗೆ, ಸಿಂಧೂರ, ಬಳೆ, ಬಿಚ್ಚೋಲೆ ಮುಂತಾದ ಮಂಗಲದ್ರವ್ಯಗಳನ್ನು ಅರ್ಪಿಸುವುದು)

**ಪುಷ್ಪಾಣಿ ।**

ಕೇತಕೀಜಾತಿಪುನ್ನಾಗೈಶ್ಚಂಪಕೈರ್ಬಕುಲೈಃ ಶುಭೈಃ ।
ಪೂಜಯಾಮಿ ಚ ದೇವೇಶಿ ಯಮುನೇ ಭಕ್ತವತ್ಸಲೇ ॥
ಶ್ರೀಯಮುನಾಯೈ ನಮಃ । ಪುಷ್ಪಾಣಿ ಸಮರ್ಪಯಾಮಿ ॥
(ಪುಷ್ಪಗಳನ್ನು ಅರ್ಪಿಸಬೇಕು)

**ಅಥ ಅಂಗಪೂಜಾ ।**

ಓಂ ಚಂಚಲಾಯೈ ನಮಃ, ಪಾದೌ (ಕಾಲುಗಳು) ಪೂಜಯಾಮಿ ।
ಓಂ ಚಪಲಾಯೈ ನಮಃ, ಗುಲ್ಫೌ (ಕಾಲಿನ ಗಂಟು) ಪೂಜಯಾಮಿ ।
ಓಂ ಗಿರಿಜಾಯೈ ನಮಃ, ಜಂಘೇ (ಮೊಣಕಾಲು) ಪೂಜಯಾಮಿ ।
ಓಂ ಲೋಕವಂದಿತಾಯೈ ನಮಃ, ಜಾನುನೀ (ಮಂಡಿ) ಪೂಜಯಾಮಿ ।
ಓಂ ಪೀತಾಂಬರಧರಾಯೈ ನಮಃ, ಊರೂ (ತೊಡೆ) ಪೂಜಯಾಮಿ ।
ಓಂ ಭಕ್ತವತ್ಸಲಾಯೈ ನಮಃ, ಕಟಿಂ (ಸೊಂಟ) ಪೂಜಯಾಮಿ ।
ಓಂ ಪರಾಯೈ ನಮಃ, ನಾಭಿಂ (ಹೊಕ್ಕಳು) ಪೂಜಯಾಮಿ ।
ಓಂ ಕಾಲಿಂದ್ಯೈ ನಮಃ, ಗುಹ್ಯಂ (ಗುಹ್ಯ) ಪೂಜಯಾಮಿ ।

ಓಂ ಗೌರ್ಯೈ ನಮಃ, ಉದರಂ (ಹೊಟ್ಟೆ) ಪೂಜಯಾಮಿ ।
ಓಂ ಕುಂಭಸ್ತನ್ಯೈ ನಮಃ, ಸ್ತನೌ (ಸ್ತನ) ಪೂಜಯಾಮಿ ।
ಓಂ ಅಘಹಂತ್ರ್ಯೈ ನಮಃ, ಭುಜೌ (ಭುಜ) ಪೂಜಯಾಮಿ ।
ಓಂ ರಕ್ತಕಂಠ್ಯೈ ನಮಃ, ಕಂಠಂ (ಕುತ್ತಿಗೆ) ಪೂಜಯಾಮಿ ।
ಓಂ ಸುಮುಖಾಯೈ ನಮಃ, ಮುಖಂ (ಬಾಯಿ) ಪೂಜಯಾಮಿ ।
ಓಂ ಭಾಗೀರಥ್ಯೈ ನಮಃ, ಓಷ್ಠೌ (ತುಟಿ) ಪೂಜಯಾಮಿ ।
ಓಂ ಸುನಾಸಿಕಾಯೈ ನಮಃ, ನಾಸಿಕಾಂ (ಮೂಗು) ಪೂಜಯಾಮಿ ।
ಓಂ ಉತ್ಪಲಾಕ್ಷ್ಯೈ ನಮಃ, ನೇತ್ರೇ (ಕಣ್ಣುಗಳು) ಪೂಜಯಾಮಿ ।
ಓಂ ತಾಟಂಕಧಾರಿಣ್ಯೈ ನಮಃ, ಕರ್ಣೌ (ಕಿವಿಗಳು) ಪೂಜಯಾಮಿ ।
ಓಂ ತುಂಗಾಯೈ ನಮಃ, ಲಲಾಟಂ (ಹಣೆ) ಪೂಜಯಾಮಿ ।
ಓಂ ಭದ್ರಾಯೈ ನಮಃ, ಶಿರಃ (ತಲೆ) ಪೂಜಯಾಮಿ ।
ಓಂ ಯಮುನಾಯೈ ನಮಃ, ಸರ್ವಾಂಗಾನಿ (ಎಲ್ಲಾ ಅಂಗಗಳು) ಪೂಜಯಾಮಿ ॥
(ಬಿಡಿಹೂ ಅಥವಾ ಮಂತ್ರಾಕ್ಷತೆಯಿಂದ ಯಮುನೆಗೆ ಅಂಗಪೂಜೆಯನ್ನು ಮಾಡಿರಿ)

**ಅಥ ದ್ವಾದಶನಾಮಪೂಜಾ ।**

ಓಂ ಯಮುನಾಯೈ ನಮಃ । ಓಂ ಸರ್ವೋತ್ತಮಾಯೈ ನಮಃ । ಓಂ ಗಂಗಾಯೈ ನಮಃ । ಓಂ ಗೋದಾವರ್ಯೈ ನಮಃ । ಓಂ ಸರಸ್ವತ್ಯೈ ನಮಃ । ಓಂ ನರ್ಮದಾಯೈ ನಮಃ । ಓಂ ಭವನಾಶಿನ್ಯೈ ನಮಃ । ಓಂ ಅಭೀಷ್ಟದಾಯಿನ್ಯೈ ನಮಃ । ಓಂ ಶುಭ್ರವರ್ಣಾಯೈ ನಮಃ । ಓಂ ಮಕರಭೂಷಣಾಯೈ ನಮಃ । ಓಂ ವಿಧಾತ್ರ್ಯೈ ನಮಃ । ಓಂ ಚಂದ್ರಚೂಡಾಮಣ್ಯೈ ನಮಃ । ಶ್ರೀಯಮುನಾಯೈ ನಮಃ । ದ್ವಾದಶನಾಮಪೂಜಾಂ ಸಮರ್ಪಯಾಮಿ ॥

**ಧೂಪಃ ।**

ದಶಾಂಗಂ ಗುಗ್ಗುಲೋಪೇತಂ ಸುಗಂಧಂ ಚ ಮನೋಹರಮ್ ।
ಧೂಪಂ ದಾಸ್ಯಾಮಿ ಯಮುನೇ ಕೃಪಯಾ ತ್ವಂ ಗೃಹಾಣ ತಮ್ ॥
ಶ್ರೀಯಮುನಾಯೈ ನಮಃ । ಧೂಪಮಾಘ್ರಾಪಯಾಮಿ ॥
(ಧೂಪಾರತಿಯನ್ನು ಮಾಡಬೇಕು)

**ದೀಪಮ್ ।**

ಘೃತಾಕ್ತವರ್ತಿಸಂಯುಕ್ತಮಂಧಕಾರವಿನಾಶಕಮ್ ।
ದೀಪಂ ದಾಸ್ಯಾಮಿ ತೇ ದೇವಿ ಗೃಹಾಣ ಮುದಿತಾ ಭವ ॥
ಶ್ರೀಯಮುನಾಯೈ ನಮಃ । ದೀಪಂ ದರ್ಶಯಾಮಿ ॥
(3 ಬತ್ತಿಗಳುಳ್ಳ ಏಕಾರತಿ ದೀಪವನ್ನು ಮಾಡಬೇಕು)

**ನೈವೇದ್ಯಮ್ ।**

ನೈವೇದ್ಯಂ ಷಡ್ರಸೋಪೇತಂ ದಧಿಮಧ್ವಾಜ್ಯಸಂಯುತಮ್ ।
ನಾನಾಭಕ್ಷ್ಯಫಲೋಪೇತಂ ಗೃಹಾಣಾಭೀಷ್ಟದಾಯಿನಿ ॥
ಬೀಜಪೂರಾಮ್ರಪನಸಖರ್ಜೂರೀಕದಲೀಫಲಮ್ ।
ನಾರಿಕೇಲಫಲಂ ದಿವ್ಯಂ ಗೃಹಾಣ ಸುರಪೂಜಿತೇ ॥
ಶ್ರೀಯಮುನಾಯೈ ನಮಃ । ನೈವೇದ್ಯಂ ಸಮರ್ಪಯಾಮಿ ॥
ನಾನಾವಿಧಫಲಾನಿ ಚ ಸಮರ್ಪಯಾಮಿ ॥
(ನೈವೇದ್ಯ ಹಾಗೂ ಹಣ್ಣುಗಳನ್ನು ಸಮರ್ಪಿಸಬೇಕು)

**ಪಾನೀಯಮ್ ।**

ಘನಸಾರಸುಗಂಧೇನ ಮಿಶ್ರಿತಂ ಪುಷ್ಪವಾಸಿತಮ್ ।
ಪಾನೀಯಂ ಗೃಹ್ಯತಾಂ ದೇವಿ ಶೀತಲಂ ಸುಮನೋಹರಮ್ ॥
ಶ್ರೀಯಮುನಾಯೈ ನಮಃ । ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ ।
ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಮುಖಪ್ರಕ್ಷಾಲನಂ ಸಮರ್ಪಯಾಮಿ ।
ಆಚಮನಂ ಸಮರ್ಪಯಾಮಿ ।
(ನೀರನ್ನು ಅರ್ಘ್ಯಪಾತ್ರೆಗೆ ಬಿಡಬೇಕು)

**ತಾಂಬೂಲಮ್ ।**

ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಮ್ ।
ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥
ಶ್ರೀಯಮುನಾಯೈ ನಮಃ । ತಾಂಬೂಲಂ ಸಮರ್ಪಯಾಮಿ ॥
(5 ಎಲೆ ಸಹಿತ ಅಡಿಕೆಯನ್ನು ಸಮರ್ಪಿಸಬೇಕು)

**ದಕ್ಷಿಣಾ ।**

ಸುವರ್ಣಂ ಸರ್ವಧಾತೂನಾಂ ಶ್ರೇಷ್ಠಂ ದೇವಿ ಚ ತತ್ಸದಾ ।
ಭಕ್ತ್ಯಾ ದದಾಮಿ ವರದೇ ಸ್ವರ್ಣವೃಷ್ಟಿಂ ಚ ದೇಹಿ ಮೇ ॥
ಶ್ರೀಯಮುನಾಯೈ ನಮಃ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ॥
(ತಾಂಬೂಲದಲ್ಲಿ ದಕ್ಷಿಣೆಯನ್ನಿಡಬೇಕು)

**ಮಂಗಲನೀರಾಜನಮ್ ।**

ನೀರಾಜನಂ ಸುಮಾಂಗಲ್ಯಂ ಕರ್ಪೂರೇಣ ಸಮನ್ವಿತಮ್ ।
ವಹ್ನಿಚಂದ್ರಾರ್ಕಸದೃಶಂ ಗೃಹಾಣ ದುರಿತಾಪಹೇ ॥
ಶ್ರೀಯಮುನಾಯೈ ನಮಃ । ಮಹಾನೀರಾಜನಂ ಸಮರ್ಪಯಾಮಿ ॥
(5 ಬತ್ತಿಯಿಂದ ಮಂಗಳಾರತಿಯನ್ನು ಮಾಡಬೇಕು)

**ಮಂತ್ರಪುಷ್ಪಾಂಜಲಿಃ ।**

ಯಮುನಾಯೈ ನಮಸ್ತುಭ್ಯಂ ಸರ್ವಾಭೀಷ್ಟಪ್ರದೇ ಶಿವೇ ।
ಸರ್ವವ್ರತೋತ್ತಮೇ ದೇವಿ ಭದ್ರಾಯೈ ತೇ ನಮೋ ನಮಃ ॥
ಶ್ರೀಯಮುನಾಯೈ ನಮಃ । ಮಂತ್ರಪುಷ್ಪಾಂಜಲಿಂ ಸಮರ್ಪಯಾಮಿ ॥
(ಮಂತ್ರಾಕ್ಷತೆ-ಬಿಡಿಹೂಗಳನ್ನು ಹಾಕಬೇಕು)

**ಪ್ರದಕ್ಷಿಣಾ ।**

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿ ತಾನಿ ಪ್ರಣಶ್ಯಂತಿ ಪ್ರದಕ್ಷಿಣಪದೇ ಪದೇ ॥
ಶ್ರೀಯಮುನಾಯೈ ನಮಃ । ಪ್ರದಕ್ಷಿಣಂ ಸಮರ್ಪಯಾಮಿ ॥
(ಪ್ರದಕ್ಷಿಣೆಗಳನ್ನು ಹಾಕಬೇಕು)

**ನಮಸ್ಕಾರಃ ।**

ನಮಸ್ತೇ ಸರ್ವಲೋಕಾನಾಂ ಜನನ್ಯೈ ಪುಣ್ಯಮೂರ್ತಯೇ ।
ನಮಸ್ತೇ ದೇವಿ ಕಲ್ಯಾಣಿ ನಮಸ್ತೇ ಮುನಿಪೂಜಿತೇ ॥
ಶ್ರೀಯಮುನಾಯೈ ನಮಃ । ನಮಸ್ಕಾರಾನ್ ಸಮರ್ಪಯಾಮಿ ॥
(ನಮಸ್ಕಾರಗಳನ್ನು ಮಾಡಬೇಕು)

**ರಾಜೋಪಚಾರಪೂಜಾ ।**

ಛತ್ರಚಾಮರವ್ಯಜನದರ್ಪಣನೃತ್ತಗೀತವಾದ್ಯಾಂದೋಲಿಕಾದಿ
ಸಮಸ್ತರಾಜೋಪಚಾರಾನ್ ಸಮರ್ಪಯಾಮಿ ॥
(ಮಂತ್ರಾಕ್ಷತೆ ಹಾಕುವುದು)

**ಪ್ರಾರ್ಥನಾ ।**

ಕರಿಷ್ಯಾಮಿ ವ್ರತಂ ದೇವಿ ತ್ವದ್ಭಕ್ತ್ಯಾ ತ್ವತ್ಪರಾಯಣಾ ।
ವಾಂಛಿತಂ ದೇಹಿ ಮೇ ನಿತ್ಯಂ ಹರೌ ಭಕ್ತಿಮಚಂಚಲಾಮ್ ॥

ಸುರಾಸುರೇಂದ್ರಾದಿಕಿರೀಟಮೌಕ್ತಿಕೈರ್ಯುಕ್ತಂ ಸದಾ ಯತ್ತವ ಪಾದಪಂಕಜಂ ।
ಪರಾವರಂ ಪಾತು ವರಂ ಸುಮಂಗಲಂ ನಮಾಮಿ ಭಕ್ತ್ಯಾ ಮಮ ಕಾಮಸಿದ್ಧಯೇ ॥

ಭವಾನಿ ಚ ಮಹಾಲಕ್ಷ್ಮಿ ಸರ್ವಕಾಮಪ್ರದಾಯಿನಿ ।
ವ್ರತಂ ಸಂಪೂರ್ಣತಾಂ ಯಾತು ಯಮುನಾಯೈ ನಮೋಽಸ್ತು ತೇ ॥
ಶ್ರೀಯಮುನಾಯೈ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥
(ಪ್ರಾರ್ಥಿಸಬೇಕು)

**ಸಮಾಪನಮ್ ।**

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ॥

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಯಮುನಾ ಪೂಜನೇನ ಶ್ರೀಮದ್ರಾಘವೇಂದ್ರಗುರ್ವಂತರ್ಗತ ಯಮುನಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಜಯಾಪತಿ ಸಂಕರ್ಷಣಃ ಪ್ರೀಯತಾಂ ಸುಪ್ರೀತೋ ವರದೋ ಭವತು ಶ್ರೀಕೃಷ್ಣಾರ್ಪಣಮಸ್ತು ॥

(ಮೀಸಲು ನೀರು ಮತ್ತು ಮಂತ್ರಾಕ್ಷತೆಗಳನ್ನು ಕೈಗೆ ಹಾಕಿಕೊಂಡು ಅರ್ಘ್ಯಪಾತ್ರೆಗೆ ಬಿಡಬೇಕು)

**ಅಥ ಶೇಷಾಂತರ್ಗತ ಸಂಕರ್ಷಣಪೂಜಾ ।**

ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಶ್ರೀಶೇಷಾಂತರ್ಗತ ಜಯಾಪತಿ ಸಂಕರ್ಷಣಪೂಜಾಂ ಕರಿಷ್ಯೇ ॥ (ಎಂದು ಮಂತ್ರಾಕ್ಷತೆ-ನೀರು ಬಿಡಬೇಕು) ಯಮುನಾ-ಕಲಶೋಪರಿ ಸಪ್ತಫಣಾನ್ವಿತಂ ದರ್ಭಮಯಂ ಅನಂತಂ ಸಂಸ್ಥಾಪ್ಯ, ಪ್ರಾಣಪ್ರತಿಷ್ಠಾಂ ಕುರ್ಯಾತ್ ॥

**ಪೀಠಪೂಜಾ ।**

ಪೀಠಮಧ್ಯೇ ಪರದೇವತಾಯೈ ಶ್ರೀಲಕ್ಷ್ಮೀನಾರಾಯಣಾಯ ನಮಃ । ದೇವಸ್ಯ ವಾಮಭಾಗೇ ಗುರವೇ ವಾಯುವೇ ನಮಃ । ದಕ್ಷಿಣೇ ಸರ್ವದೇವತಾಭ್ಯೋ ಬ್ರಹ್ಮರುದ್ರಾದಿಭ್ಯೋ ನಮಃ । ಪುನರ್ವಾಮೇ ಸನಕಾದಿಸರ್ವಗುರುಭ್ಯೋ ನಮಃ । ಆಗ್ನೇಯೇ ಗಂ ಗರುಡಾಯ ನಮಃ । ನೈಋತ್ಯಾಂ ವ್ಯಾಂ ವೇದವ್ಯಾಸಾಯ ನಮಃ । ವಾಯವ್ಯೇ ದುಂ ದುರ್ಗಾಯೈ ನಮಃ । ಈಶಾನ್ಯೇ ಸಂ ಸರಸ್ವತ್ಯೈ ನಮಃ ॥ ಏತಾಃ **ಪೀಠಪಾದದೇವತಾಃ** ॥ ಧರ್ಮಾಧಿಪತಯೇ ಯಮಾಯ ನಮಃ । ಜ್ಞಾನಾಧಿಪತಯೇ ವಾಯವೇ ನಮಃ । ವೈರಾಗ್ಯಾಧಿಪತಯೇ ರುದ್ರಾಯ ನಮಃ । ಐಶ್ವರ್ಯಾಧಿಪತಯೇ ಇಂದ್ರಾಯ ನಮಃ ॥ ಏತಾಃ **ಪೀಠಫಲಕದೇವತಾಃ** ॥ ಅಧರ್ಮಾಧಿಪತಯೇ ನಿರ್ಋತಯೇ ನಮಃ । ಅಜ್ಞಾನಾಧಿಪತಯೇ ದುರ್ಗಾಯೈ ನಮಃ । ಅವೈರಾಗ್ಯಾಧಿಪತಯೇ ಕಾಮಾಯ ನಮಃ । ಅನೈಶ್ವರ್ಯಾಧಿಪತಯೇ ರುದ್ರಾಯ ನಮಃ ॥ ಮಧ್ಯೇ ಪಾತಾಲೇ ಪರಮಪುರುಷಾಯ ನಮಃ । ತದುಪರ್ಯುದಕೇ ಬ್ರಹ್ಮಾಂಡಾಧಾರಾಯ ವಿಷ್ಣುಕೂರ್ಮಾಯ ನಮಃ । ತದುಪರಿ ಗರ್ಭೋದಕೇ ಕೂರ್ಮರೂಪಾಯ ವಿಷ್ಣವೇ ನಮಃ । ತತ್ಪುಚ್ಛಾಶ್ರಿತಾಯ ವಾಯುಕೂರ್ಮಾಯ ನಮಃ । ತತ್ಪುಚ್ಛಾಶ್ರಿತಾಯ ಸಹಸ್ರಫಣಾಮಂಡಲಮಂಡಿತಾಯ ಶ್ರೀಮದನಂತಾಯ ನಮಃ । ಪೃಥಿವ್ಯಭಿಮಾನಿನ್ಯೈ ಧರಾಯೈ ನಮಃ । ಕ್ಷೀರಸಾಗರಾಭಿಮಾನಿನೇ

ವರುಣಾಯ ನಮಃ । ಶ್ವೇತದ್ವೀಪಾತ್ಮಿಕಾಯೈ ರಮಾಯೈ ನಮಃ । ತತ್ರ ನವರತ್ನಖಚಿತಚತುಸ್ತಂಭಯುಕ್ತಮಹಾಮಂಟಪಾತ್ಮಿಕಾಯೈ ಶ್ರೀಲಕ್ಷ್ಮ್ಯೈ ನಮಃ । ಪದ್ಮಾತ್ಮಿಕಾಯೈ ಶ್ರಿಯೈ ನಮಃ । ಕಂದಾತ್ಮಿಕಾಯೈ ಶ್ರಿಯೈ ನಮಃ । ನಾಳಾತ್ಮಿಕಾಯೈ ಶ್ರಿಯೈ ನಮಃ । ತತ್ಕರ್ಣಿಕಾತ್ಮಿಕಾಯೈ ಶ್ರಿಯೈ ನಮಃ ॥ ಪದ್ಮಾದ್ಬಹಿಃ ಸೂರ್ಯಮಂಡಲಾಧಿಪತಯೇ ಶ್ರೀನಾರಾಯಣಾಯ ನಮಃ । ಸೋಮಮಂಡಲಾಧಿ- ಪತಯೇ ಶ್ರೀವಿಷ್ಣವೇ ನಮಃ । ಹುತಾಶನಮಂಡಲಾಧಿಪತಯೇ ಶ್ರೀಲಕ್ಷ್ಮೀನರಸಿಂಹಾಯ ನಮಃ ॥ ದಕ್ಷಿಣೇ ಸತ್ವಾಭಿಮಾನಿನ್ಯೈ ಶ್ರಿಯೈ ನಮಃ । ವಾಮೇ ರಜೋಭಿಮಾನಿನ್ಯೈ ಧರಾಯೈ ನಮಃ । ಪೃಷ್ಠೇ ತಮೋಭಿಮಾನಿನ್ಯೈ ದುರ್ಗಾಯೈ ನಮಃ ॥ ಪೂರ್ವೇ ಆತ್ಮನೇ ನಮಃ । ದಕ್ಷಿಣೇ ಅಂತರಾತ್ಮನೇ ನಮಃ । ಪಶ್ಚಿಮೇ ಪರಮಾತ್ಮನೇ ನಮಃ । ಉತ್ತರೇ ಜ್ಞಾನಾತ್ಮನೇ ನಮಃ ॥ ವಿಮಲಾಯೈ ನಮಃ । ಉತ್ಕರ್ಷಿಣ್ಯೈ ನಮಃ । ಜ್ಞಾನಾಯೈ ನಮಃ । ಕ್ರಿಯಾಯೈ ನಮಃ । ಯೋಗಾಯೈ ನಮಃ । ಪ್ರಹ್ವ್ಯೈ ನಮಃ । ಸತ್ಯಾಯೈ ನಮಃ । ಈಶಾನಾಯೈ ನಮಃ । ಮಧ್ಯೇ ಅನುಗ್ರಹಾಯೈ ನಮಃ ॥ ಏತಾಃ ವೀಜಿತಚಾಮರಹಸ್ತಾಃ ತಿಷ್ಠಂತಿ ॥ ತಸ್ಯಾಗ್ರೇ ಸಹಸ್ರಫಣಾಮಂಡಲಮಂಡಿತಾಯ ಕುಂಡಲಾಕೃತಿಸ್ವರೂಪಾಯ ಹರೇರ್ಯೋಗಪೀಠ- ಸ್ವರೂಪಾಯ ಶ್ರೀಮದನಂತಾಯ ನಮಃ ॥ ಪೀಠಪೂಜಾಂ ಸಮರ್ಪಯಾಮಿ ॥ (ಪೀಠಕ್ಕೆ ಮಂತ್ರಾಕ್ಷತೆ ಮತ್ತು ಬಿಡಿಹೂಗಳನ್ನು ಹಾಕಬೇಕು. ಪ್ರತಿಯೊಂದು ನಾಮಗಳ ಆರಂಭದಲ್ಲಿ ಓಂಕಾರವನ್ನು ಸೇರಿಸಿಕೊಳ್ಳಬೇಕು)

## ॥ ಪ್ರಾಣಪ್ರತಿಷ್ಠಾವಿಧಿಃ ॥

ಅಧೋಮುಖಂ ಹೃತ್ಕಮಲಂ ತೋರಣೋದ್ಧರಣಂ ಚರೇತ್ ।
ವಿಕಾಸ್ಯ ಜ್ಞಾನರವಿಣಾ ಕರ್ಣಿಕಾಸ್ಥಂ ಪರಂ ವಿಭುಮ್ ॥

ಹೃದಯಸ್ಥಾ ಹರೇರ್ಮೂರ್ತಿಃ ಜೀವೋ ಯತ್ಪ್ರತಿಬಿಂಬಕಃ ।
ಯದ್ವಶೇ ವರ್ತತೇ ಜೀವಃ ಸಾ ತು ಜೀವಕಲಾ ಸ್ಮೃತಾ ॥

ಜೀವಾಂತರ್ಯಾಮಿತೋ ವಿಷ್ಣುಃ ಆತ್ಮಾ ನಾಮ ಪ್ರಕೀರ್ತಿತಃ ।
ತೇಜಸ್ಸಾರಮಯೀಂ ದಿವ್ಯಾಂ ಪ್ರತಿಮಾಂ ಪ್ರತಿಮಾಗತಾಮ್ ॥

ಧ್ಯಾತ್ವಾ ಪ್ರಾಣಾಧಿಪಂ ತತ್ರ ಪ್ರತಿಮಾರೂಪಿಣಂ ಪ್ರಭುಮ್ ।
ತನ್ಮಧ್ಯೇ ರಮಯಾ ಸಾರ್ಧಮಾಸೀನಂ ಕ್ಷೀರನೀರವತ್ ॥
ಪ್ರತಿಮಾರೂಪಿಣಂ ಸಮ್ಯಗ್ಧ್ಯಾತ್ವೈವಾವಾಹಯೇತ್ಸುಧೀಃ ॥

ಓಂ ॥ ಆತ್ಮಾದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ ।
ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ॥

ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ಶ್ರೀಪುರುಷೋತ್ತಮ ।

ಆವಾಹಯಾಮಿ ಪೀಠೇ ತ್ವಾಂ ಪ್ರತಿಮಾಯಾಂ ಜಗತ್ಪತೇ ।
ಇತಿ ಸಂಪ್ರಾರ್ಥ್ಯ ದೇವೇಶಂ ಷಣ್ಮುದ್ರಾಂಶ್ಚ ಪ್ರದರ್ಶಯೇತ್ ॥

(ಹೃದಯಕಮಲದಲ್ಲಿರುವ ಶ್ರೀಹರಿಯನ್ನು ಶ್ವಾಸಮಾರ್ಗದಿಂದ ಹಸ್ತಗಳಲ್ಲಿರುವ ಪುಷ್ಪಗಳಲ್ಲಿ ಬಂದಿರುವನೆಂದು ಚಿಂತಿಸಿ, ಕಲಶ / ಪ್ರತಿಮೆಗಳ ಮೇಲೆ ಹಾಕಿ ಆವಾಹಿಸಬೇಕು)

ಓಂ ಆವಾಹಿತೋ ಭವ । ಸ್ಥಾಪಿತೋ ಭವ । ಸನ್ನಿಹಿತೋ ಭವ । ಅವಕುಂಠಿತೋ ಭವ । ಸುಪ್ರಸನ್ನೋ ಭವ । ವರದೋ ಭವ ॥

ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ಕರೋ ಭವ ।
ವಿಭೋ ಸಕಲಲೋಕೇಶ ದೇವದೇವ ಜಗತ್ಪತೇ ॥

ತ್ವಾಂ ಪೂಜಯಾಮಿ ಸದ್ಭಕ್ತ್ಯಾ ಭೋಗೈರರ್ಘ್ಯಾದಿಭಿಃ ಕ್ರಮಾತ್ ।
ಯಾಗಾವಸಾನಪರ್ಯಂತಂ ಅತ್ರ ಸ್ಥಿತ್ವಾ ಜಗತ್ಪತೇ ॥
ಭಕ್ತಸ್ಯ ಮಮ ಪೂಜಾಂ ಚ ಗೃಹೀತ್ವಾ ಪಾಹಿ ಮಾಂ ಪ್ರಭೋ ॥

ಮೂಲಮಂತ್ರಂ ಜಪಿತ್ವಾ, (ಕೈಯಲ್ಲಿ ಮಂತ್ರಾಕ್ಷತೆ, ಹೂವು ಮೊದಲು ಹಿಡಿದುಕೊಂಡಿದ್ದು ಈಗ) ಓಂ ನಮೋ ಭಗವತೇ ವಾಸುದೇವಾಯ ಸಶಕ್ತಿ ಸಾಂಗ ಸಾಯುಧ ಸವಾಹನ ಸಶ್ರೀಕಾಯ ಸಪರಿವಾರಾಯ ಶ್ರೀಮದನಂತಪದ್ಮನಾಭಾಯ ನಮಃ । ಏಹ್ಯೇಹಿ ಅತ್ರೈವಾಽಗಚ್ಛಾಽಗಚ್ಛ । ಪೂಜಾರ್ಥಂ ಆವಾಹಯಿಷ್ಯೇ । ಓಂ ಭೂಃ ಅನಂತಂ ಆವಾಹಯಾಮಿ । ಓಂ ಭುವಃ ಅನಂತಂ ಆವಾಹಯಾಮಿ । ಓಂ ಸ್ವಃ ಅನಂತಂ ಆವಾಹಯಾಮಿ । ಭೂರ್ಭುವಸ್ಸ್ವಃ ಅನಂತಂ ಆವಾಹಯಾಮಿ । ಆವಾಹಿತೋ ಭವ, ಸ್ಥಾಪಿತೋ ಭವ, ಸನ್ನಿಹಿತೋ ಭವ, ಸನ್ನಿರುದ್ಧೋ ಭವ, ಅವಕುಂಠಿತೋ ಭವ, ಸುಪ್ರಸನ್ನೋ ಭವ, ವರದೋ ಭವ, ಶಾಂತೋ ಭವ, ಪ್ರಸೀದ ಪ್ರಸೀದ ॥

ಓಂ ॥ ಗೃಹಾ ವೈ ಪ್ರತಿಷ್ಠಾಸೂಕ್ತಂ ತತ್ಪ್ರತಿಷ್ಠಿತತಮಯಾ ವಾಚಾ ಶಂಸ್ತವ್ಯಮ್ ।
ತಸ್ಮಾದ್ಯದ್ಯಪಿ ದೂರ ಇವ ಪಶೂಂಲ್ಲಭತೇ ನಾನಾಜಿಗಮಿಷತಿ ಗೃಹಾಹಿ
ಪಶೂನಾಂ ಪ್ರತಿಷ್ಠಾ ಪ್ರತಿಷ್ಠಾ ॥

ಓಂ ॥ ಧ್ರುವಾದ್ಯೌಃ ಧ್ರುವಾ ಪೃಥಿವೀ ಧ್ರುವಾಸಃ ಪರ್ವತಾ ಇಮೇ ।
ಧ್ರುವಂ ವಿಶ್ವಮಿದಂ ಜಗದ್ಧ್ರುವೋ ರಾಜಾ ವಿಶಾಮಯಂ ॥
ಧ್ರುವಂ ತೇ ರಾಜಾ ವರುಣೋ ಧ್ರುವಂ ದೇವೋ ಬೃಹಸ್ಪತಿಃ ।
ಧ್ರುವಂ ತ ಇಂದ್ರಶ್ಚಾಗ್ನಿಶ್ಚ ರಾಷ್ಟ್ರಂ ಧಾರಯತಾಂ ಧ್ರುವಮ್ ॥
ಭೋ ಸ್ವಾಮಿನ್ ಜಗತಾಂ ನಾಥ ಯಾವತ್ಪೂಜಾವಸಾನಕಮ್ ।
ತಾವತ್ ಸಂಪ್ರೀತಿಭಾವೇನ ಬಿಂಬೇಽಸ್ಮಿನ್ ಸುಸ್ಥಿರೋ ಭವ ॥
(ಆವಾಹನಾದಿ ಆರು ಮುದ್ರೆಗಳನ್ನು ತೋರಿಸಬೇಕು)

**ಅಥ ಧ್ಯಾನಮ್ ।**

ಕೃತ್ವಾ ದರ್ಭಮಯಂ ದೇವಂ ಪರಿಧಾನಸಮನ್ವಿತಮ್ ।
ಫಣಸಪ್ತಾನ್ವಿತಂ ದೇವಂ ಪಿಂಗಲಾಕ್ಷಂ ಚತುರ್ಭುಜಮ್ ॥
ದಕ್ಷಿಣಾಗ್ರಕರೇ ಪದ್ಮಂ ಶಂಖಂ ತಸ್ಯಾಪ್ಯಧಃಕರೇ ।
ಚಕ್ರಮೂರ್ಧ್ವಕರೇ ವಾಮೇ ಗದಾಂ ತಸ್ಯಾಪ್ಯಧಃಕರೇ ॥
ದಧಾನಂ ಸರ್ವಲೋಕೇಶಂ ಸರ್ವಾಭರಣಭೂಷಿತಮ್ ।
ನವಾಮ್ರಪಲ್ಲವಾಭಾಸಂ ಪಿಂಗಲಭ್ರೂಸುಲೋಚನಮ್ ॥
ಅವ್ಯಯಂ ಸರ್ವಲೋಕೇಶಂ ಪೀತಾಂಬರಧರಂ ಹರಿಮ್ ।
ಅನಂತಕೃತಂ ಸಮುದ್ರೇಣ ತತ್ಸ್ವರೂಪಂ ವಿಚಿಂತಯೇತ್ ॥
ಬ್ರಹ್ಮಾಂಡಾಧಾರಭೂತಂ ಚ ಯಮುನಾಂತರವಾಸಿನಮ್ ।
ಫಣಾಸಪ್ತಕಸಂಯುಕ್ತಂ ಧ್ಯಾಯೇಽನಂತಂ ಹರಿಪ್ರಿಯಮ್ ॥
'ಓಂ ಶೇಂ ಶೇಷಾಯ ನಮಃ ಓಂ' ಎಂದು ಮೂಲಮಂತ್ರವನ್ನು ಜಪಿಸಬೇಕು.
ಶೇಷಾಯ ನಮಃ । ಧ್ಯಾಯಾಮಿ । ಧ್ಯಾನಂ ಸಮರ್ಪಯಾಮಿ ॥

**ಆವಾಹನಮ್ ।**

ಶೇಷಂ ಸಪ್ತಫಣಾಯುಕ್ತಂ ಕಾಲಪನ್ನಗನಾಯಕಮ್ ।
ಅನಂತಶಯನಾರ್ಥಂ ತ್ವಾಂ ಭಕ್ತ್ಯಾ ಹ್ಯಾವಾಹಯಾಮ್ಯಹಮ್ ॥
ದಧಾನೋ ಹಲಸೌನಂದೌ ಶ್ವೇತವರ್ಣಃ ಕೃತಾಂಜಲಿಃ ।
ಸಹಸ್ರಮೂರ್ಧಾ ದ್ವಿತೀಯಕರ್ಣಭೂಷಃ ಪ್ರಿಯಾಯುತಃ ॥
ವನಮಾಲೀ ನೀಲವಾಸಃ ಧ್ಯೇಯೋ ವಿಷ್ಣೋಽಸ್ತು ಪೃಷ್ಠತಃ ।
ಓಂ ಶೇಂ ಶೇಷಾಯ ನಮಃ । ಅಸ್ಯಾಂ ದರ್ಭಮಯ್ಯಾಂ ಪ್ರತಿಮಾಯಾಂ ॥
ಶೇಷಮಾವಾಹಯಾಮಿ ॥

**ಆಸನಮ್ ।**

ನವನಾಗಕುಲಾಧೀಶ ಶೇಷೋದ್ಧಾರಕ ಕಾಶ್ಯಪ ।
ನಾನಾರತ್ನಸಮಾಯುಕ್ತಂ ಆಸನಂ ಪ್ರತಿಗೃಹ್ಯತಾಮ್ ॥
ಓಂ ಶೇಂ ಶೇಷಾಯ ನಮಃ । ಆಸನಂ ಸಮರ್ಪಯಾಮಿ ॥
(ಆಸನವನ್ನು ಸಮರ್ಪಿಸಬೇಕು)

**ಪಾದ್ಯಮ್ ।**

ಅನಂತಪ್ರಿಯ ಶೇಷೇಶ ಜಗದಾಧಾರ ವಿಗ್ರಹ ।
ಪಾದ್ಯಂ ಗೃಹಾಣ ಭಕ್ತ್ಯಾ ತ್ವಂ ಕಾದ್ರವೇಯ ನಮೋಽಸ್ತು ತೇ ॥
ಓಂ ಶೇಂ ಶೇಷಾಯ ನಮಃ । ಪಾದಯೋಃ ಪಾದ್ಯಂ ಸಮರ್ಪಯಾಮಿ ॥
(ಕಾಲುಗಳಿಗೆ ತೊಳೆಯಲು ನೀರನ್ನು ಸಮರ್ಪಿಸಬೇಕು)

**ಅರ್ಘ್ಯಮ್ ।**

ಕಶ್ಯಪಾನಂದಜನಕ ಮುನಿವಂದಿತ ಭೋಃ ಪ್ರಭೋಃ ।
ಅರ್ಘ್ಯಂ ಗೃಹಾಣ ಸರ್ವಜ್ಞ ಸಾದರಂ ಶ್ರೀಕರಪ್ರಿಯ ॥
ಓಂ ಶೇಂ ಶೇಷಾಯ ನಮಃ । ಹಸ್ತಯೋರರ್ಘ್ಯಂ ಸಮರ್ಪಯಾಮಿ ॥
(ಮೀಸಲು ನೀರನ್ನು ಶೇಷದೇವರಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು)

**ಆಚಮನಮ್ ।**

ಸಹಸ್ರಫಣಿರೂಪೇಣ ವಸುಧೋದ್ಧಾರಕ ಪ್ರಭೋಃ ।
ಗೃಹಾಣಾಚಮನಂ ದೇವ ಪಾವನಂ ಚ ಸುಶೀತಲಮ್ ॥
ಓಂ ಶೇಂ ಶೇಷಾಯ ನಮಃ । ಆಚಮನಂ ಸಮರ್ಪಯಾಮಿ ॥
(ಮೀಸಲು ನೀರನ್ನು ಶೇಷದೇವರಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು)

**ಮಧುಪರ್ಕಃ ।**

ಕುಮಾರರೂಪಿಣೇ ತುಭ್ಯಂ ದಧಿಮಧ್ವಾಜ್ಯಸಂಯುತಮ್ ।
ಮಧುಪರ್ಕಂ ಪ್ರದಾಸ್ಯಾಮಿ ಸರ್ಪರಾಜ ನಮೋಽಸ್ತು ತೇ ॥
ಓಂ ಶೇಂ ಶೇಷಾಯ ನಮಃ । ಮಧುಪರ್ಕಂ ಸಮರ್ಪಯಾಮಿ ॥
(ಮೊಸರು, ತುಪ್ಪ, ಜೇನುತುಪ್ಪಗಳಲ್ಲಿ ಒಂದು ಬಿಡಿಹೂವನ್ನು ಅದ್ದಿ ಶೇಷದೇವರಿಗೆ ಸಮರ್ಪಿಸಬೇಕು)

**ಅಭಿಷೇಕಃ ।**

ಗಂಗಾಸರಸ್ವತೀರೇವಾಪಯೋಷ್ಣೀನರ್ಮದಾಜಲೈಃ ।
ಸ್ನಾಪಯಾಮ್ಯುರಗಾಧ್ಯಕ್ಷ ಮುದಿತೋ ಭವ ಸರ್ವದಾ ॥
ಓಂ ಶೇಂ ಶೇಷಾಯ ನಮಃ । ಮಲಾಪಕರ್ಷಣಸ್ನಾನಂ ಸಮರ್ಪಯಾಮಿ ॥
(ಮೀಸಲು ನೀರನ್ನು ಬಿಡಿಹೂವಿನಿಂದ ಶೇಷದೇವರಿಗೆ ಪ್ರೋಕ್ಷಿಸಬೇಕು)

**ಪಂಚಾಮೃತಸ್ನಾನಮ್ ।**

ಕ್ಷೀರಂ ದಧಿ ಘೃತಂ ಚೈವ ಮಧು ಶರ್ಕರಯಾನ್ವಿತಮ್ ।
ಪಂಚಾಮೃತಸ್ನಾನಮಿದಂ ಸ್ವೀಕುರುಷ್ವ ದಯಾನಿಧೇ ॥
ಓಂ ಶೇಂ ಶೇಷಾಯ ನಮಃ । ಪಂಚಾಮೃತಸ್ನಾನಂ ಸಮರ್ಪಯಾಮಿ ॥
(ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಹಣ್ಣುಗಳು ಇವುಗಳ ಮಿಶ್ರಣವನ್ನು ಬಿಡಿಹೂವಿನಿಂದ ಶೇಷದೇವರಿಗೆ ಪ್ರೋಕ್ಷಿಸಬೇಕು)

ಸಾನ್ನಿಧ್ಯಪ್ರಾರ್ಥನಾದಿ (ವ್ಯಾಸಗಾಯತ್ರ್ಯಾ) ದೇವಪೂಜಾವತ್ ಷೋಡಶೋ-ಪಚಾರಪೂಜಾಂ ಕೃತ್ವಾ, ರಮಾದೀನಾಂ ಯಥಾಯೋಗ್ಯಂ ಪೂಜಾಂ ಕುರ್ಯಾತ್ । ತತ್ಕಾಲೇ ಅಂಭೃಣೀಸೂಕ್ತ, ಮನ್ಯುಸೂಕ್ತ, ಸರಸ್ವತೀಸೂಕ್ತ, ರಾತ್ರಿಸೂಕ್ತಾದೀನಿ ಬ್ರಾಹ್ಮಣಪಂಚಕಾಂಶ್ಚ ಪಠೇತ್ । ಭಗವತ್ಪ್ರಸಾದಗಂಧಪುಷ್ಪಪಂಚಖಾದ್ಯಾದಿ- ನೈವೇದ್ಯಾದೀನಿ ವ್ಯಾಸಶಿಷ್ಯೇಭ್ಯೋ ದದ್ಯಾತ್ । ಪುಸ್ತಕೇಷು ಮುಖವಸ್ತ್ರಂ ಸಮರ್ಪ್ಯ ।

ಯಸ್ಯ ಸ್ಮೃತ್ಯಾ ಚ --- ಅನೇನ ಶ್ರೀಸರಸ್ವತ್ಯಾತ್ಮಕ ವ್ಯಾಸಪರಶುರಾಮಪೂಜನೇನ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವ್ಯಾಸಪರಶುರಾಮಃ ಪ್ರಿಯತಾಮ್ ॥

(ಈ ರೀತಿಯಾಗಿ ಪುಸ್ತಕಪೂಜೆಯ ಆರಂಭದ ದಿನದಿಂದ ಮೂರು ದಿವಸ ಮಧ್ಯಾಹ್ನದಲ್ಲಿ ವಿಶೇಷ ಪೂಜೆ ಮತ್ತು ನೈವೇದ್ಯಗಳನ್ನು ಮಾಡಬೇಕು. ಸಾಯಂಕಾಲದ ಪೂಜೆ ಮಾಡಿ ಮಹಾಮಂಗಳಾರತಿಯನ್ನು ಮಾಡಬೇಕು)

ಈ ಕೆಳಗಿನ ಮಂತ್ರದಿಂದ ಸ್ಥಾಪಿತ ಸರಸ್ವತಿಯನ್ನು ಶ್ರವಣಾನಕ್ಷತ್ರದ ದಿನ ವಿಸರ್ಜನೆ ಮಾಡಬೇಕು.

ಉತ್ತಿಷ್ಠ ಬ್ರಹ್ಮಣಸ್ಪತೇ ದೇವಯಂತಸ್ತ್ವೇಮಹೇ ।
ಉಪಪ್ರಯಂತು ಮರುತಸ್ಸುದಾನವ ಇಂದ್ರಪ್ರಾಶೂರ್ಭವಾಸಚಾ ॥
ಇತಿ ಉದ್ವಾಸ್ಯ, ಹೃದಿ ಬಿಂಬರೂಪೇ ಸಂಶ್ಲಿಷ್ಟಂ ಭಾವಯೇತ್ ।

॥ ಇತಿ ಸರಸ್ವತೀಪೂಜಾಪದ್ಧತಿಃ ಸಂಪೂರ್ಣಾ ॥

* * *

## ಮಹಾನವಮೀ

### (ಆಶ್ವಯುಜಮಾಸ ಶುಕ್ಲಪಕ್ಷ ನವಮೀ)

ಶಸ್ತ್ರಾಸ್ತ್ರ, ಹಯ, ಗಜ, ವಾಹನ, ಯಂತ್ರಗಳ ಪೂಜೆ. ಇದು ಪಾಂಡವರು ಕೌರವರೊಡನೆ ಅಕ್ಷಕ್ರೀಡೆಯಲ್ಲಿ ಸೋತು 12 ವರ್ಷ ವನವಾಸ ಮುಗಿಸಿ 1 ವರ್ಷ ಅಜ್ಞಾತವಾಸ ಮಾಡುವ ಸಂದರ್ಭ ತಮ್ಮ ಆಯುಧಗಳನ್ನು ಬನ್ನಿಮರದಲ್ಲಿ ಶವಾಗಾರದಲ್ಲಿ ಕಟ್ಟಿಹಾಕಿದ್ದರಂತೆ. ಅಜ್ಞಾತವಾಸ ಮುಗಿದ ಮೂರನೇ ದಿನ ತಮ್ಮ ರೂಪಾಂತರವನ್ನು ತೊರೆದು ಶುಚಿರ್ಭೂತರಾಗಿ ಬಿಲ್ಲು-ಬಾಣ ಮೊದಲಾದ ಆಯುಧಗಳನ್ನು ಪೂಜಿಸಿ, ತದಂತರ್ಯಾಮಿ ದೇವರನ್ನು ಜಯ ಗಳಿಸಿ ಕೊಡಲೆಂದು ಪ್ರಾರ್ಥಿಸಿದ ದಿನ. ನಾವು ಕೂಡ ನಮ್ಮಲ್ಲಿರುವ ಆಯುಧ, ವಾಹನ, ಯಂತ್ರಗಳ ಪೂಜೆ ಮಾಡಿ ಅದರಿಂದ ಶ್ರೇಯಸ್ಸು ಪಡೆಯಲೋಸುಗ ಇದರ ಆಚರಣೆ.

॥ ಇತಿ ಮಹಾನವಮೀ ಸಂಪೂರ್ಣಾ ॥

* * *

## ವಿಜಯದಶಮ್ಯಾಂ ಶಮೀಪೂಜಾ
### (ಅಶ್ವಯುಜಮಾಸ ಶುಕ್ಲಪಕ್ಷ ದಶಮೀ)

ವಿಜಯದಶಮೀಯಂದು ಊರ ಹೊರಗೆ ಈಶಾನ್ಯ ದಿಕ್ಕಿನಲ್ಲಿರುವ ಶಮೀವೃಕ್ಷವನ್ನು ಪೂಜಿಸಬೇಕು.

ಶಮೀಯುಕ್ತಂ ಜಗನ್ನಾಥಂ ಭಕ್ತಾನಾಮಭಯಂಕರಮ್ ।
ಅರ್ಚಯಿತ್ವಾ ಶಮೀ ವೃಕ್ಷಮರ್ಚಯೇಚ್ಚ ತತಃ ಪುನಃ ॥

ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ । ಏವಂಗುಣವಿಶೇಷಣ-ವಿಶಿಷ್ಟಾಯಾಂ ಶುಭತಿಥೌ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ ಶ್ರೀವಿಷ್ಣುಪ್ರೀತ್ಯರ್ಥಂ ಶಮೀಪೂಜನಂ ಕರಿಷ್ಯೇ ॥

ಅಮಂಗಲಾನಾಂ ಶಮನೀಂ ಶಮನೀಂ ದುಷ್ಕೃತಸ್ಯ ಚ ।
ದುಃಸ್ವಪ್ನನಾಶನೀಂ ಧನ್ಯಾಂ ಪ್ರಪದ್ಯೇಽಹಂ ಶಮೀ ಶುಭಾಮ್ ॥

ಇತಿ ಶಮೀಂ ಧ್ಯಾನಾದಿಭಿಃ ಸಂಪೂಜ್ಯ, ಪ್ರಾರ್ಥಯೇತ್ ।
ಶಮೀ ಶಮಯತೇ ಪಾಪಂ ಶಮೀ ಲೋಹಿತಕಂಟಕಾ ।
ಧಾರಿಣ್ಯರ್ಜುನಬಾಣಾನಾಂ ರಾಮಸ್ಯ ಪ್ರಿಯವಾದಿನೀ ॥

ಕರಿಷ್ಯಮಾಣ ಯಾತ್ರಾಯಾಂ ಯಥಾ ಕಾಲಂ ಸುಖಂ ಮಯಾ ।
ತತ್ರ ನಿರ್ವಿಘ್ನಕರ್ತ್ರೀ ತ್ವಂ ಭವ ಶ್ರೀರಾಮಪೂಜಿತೇ ॥

ಎಂದು ಪ್ರಾರ್ಥಿಸಿ, ಶಮೀವೃಕ್ಷದ ಅಂತರ್ಯಾಮಿಯಾದ ಶ್ರೀಲಕ್ಷ್ಮೀನರಸಿಂಹನನ್ನು ಷೋಡಷೋಪಚಾರಗಳಿಂದ ಪೂಜಿಸಿ, ಬನ್ನಿಮಂಜರಿಯನ್ನು ಬಿಡಿಸಿಕೊಂಡು ಮಂಗಳವಾದ್ಯ-ಗಳೊಂದಿಗೆ ಮನೆಗೆ ಬಂದು, ಗುರು-ಹಿರಿಯರಿಗೆ ಬನ್ನಿಯನ್ನು ಕೊಟ್ಟು ಅವರ ಆಶೀರ್ವಾದ-ವನ್ನು ಪಡೆದು, ಎಲ್ಲರೂ ಬನ್ನಿಯನ್ನು ಪರಸ್ಪರ ವಿನಿಮಯ ಮಾಡಿಕೊಳ್ಳಬೇಕು.

॥ ಇತಿ ವಿಜಯದಶಮ್ಯಾಂ ಶಮೀಪೂಜಾ ಸಮಾಪ್ತಾ ॥
॥ ಶ್ರೀಕೃಷ್ಣಾರ್ಪಣಮಸ್ತು ॥



### ಕಾತ್ಯಾಯಿನೀ ಮಂತ್ರಃ

ಭಾಗವತದಲ್ಲಿ ಹೇಳಿದ ಕಾತ್ಯಾಯಿನೀ ಮಂತ್ರವನ್ನು 48 ದಿನಗಳ ಕಾಲ ಪ್ರತಿದಿನ 1008 ಬಾರಿ ಜಪಿಸಿದರೆ ಅವಿವಾಹಿತ ಸ್ತ್ರೀಯರಿಗೆ ಶೀಘ್ರ ವಿವಾಹಭಾಗ್ಯವು ಲಭಿಸಿ, ಒಳ್ಳೆಯ ನಡತೆಯುಳ್ಳ ವರನು ದೊರೆತು, ದಾಂಪತ್ಯ ಜೀವನವು ಸುಖಮಯವಾಗುವುದು.

**ಕಾತ್ಯಾಯಿನಿ ಮಹಾಮಾಯೇ ಮಹಾಯೋಗಿನ್ಯಧೀಶ್ವರೀ ।**
**ನಂದಗೋಪಸುತಂ ದೇವಿ ಪತಿಂ ಮೇ ಕುರುತೇ ನಮಃ ॥**

# ॥ ಜಲಪೂರಣ ತ್ರಯೋದಶೀ ॥

## (ನೀರು ತುಂಬುವ ಹಬ್ಬ)

## (ಅಶ್ವಯುಜಮಾಸ ಕೃಷ್ಣಪಕ್ಷ ತ್ರಯೋದಶೀ)

ದೀಪಾವಳಿಯ ಹಿಂದಿನ ದಿನವೆಂದರೆ ಆಶ್ವಯುಜ ಮಾಸದ ಕೃಷ್ಣಪಕ್ಷದ ತ್ರಯೋದಶಿಯಂದು ರಾತ್ರಿಪೂಜೆಯನ್ನು ಪ್ರತಿದಿನವೂ ಮಾಡುವಂತೆ ಮಾಡಿ ಮುಗಿಸಿದ ನಂತರ ಗಂಗಾಪೂಜೆಯನ್ನು ಮಾಡಬೇಕು.

ಗಂಗಾಪೂಜೆಗೆ ಸ್ನಾನಗೃಹದಲ್ಲಿ ನೀರನ್ನು ಕಾಯಿಸುವುದಕ್ಕಾಗಿ (ಬಿಸಿ ಮಾಡುವುದಕ್ಕಾಗಿ) ಉಪಯೋಗಿಸುವ ತಾಮ್ರದ ಹಂಡೆಯನ್ನು ಹುಣಸೇಹಣ್ಣಿನಿಂದ ಚೆನ್ನಾಗಿ ತೊಳೆದು, ಅದಕ್ಕೆ ಕೆಮ್ಮಣ್ಣು-ಸುಣ್ಣಗಳಿಂದ ಅಲಂಕಾರ ಮಾಡಿ, ತೋರಣ ಕಟ್ಟಿ, ಹೂವಿನಿಂದ ಅದನ್ನು ಅಲಂಕರಿಸಿ ಆ ಹಂಡೆಯೊಳಗೆ ಶುದ್ಧವಾದ ನೀರನ್ನು ಮುಕ್ಕಾಲುಭಾಗ ಹಾಕಿ ಸಿದ್ಧಪಡಿಸಬೇಕು.

ಅನಂತರ ಶುದ್ಧೋದಕ ತುಂಬಿದ ಒಂದು ಕಲಶಕ್ಕೆ ಕಲಶಪೂಜೆ ಮಾಡಬೇಕು. ಆ ಕಲಶದಲ್ಲಿ ಗಂಗಾಜನಕನಾದ, ವರುಣಾಂತರ್ಗತನಾದ ಶ್ರೀರಮಾ-ತ್ರಿವಿಕ್ರಮರೂಪಿ ಪರಮಾತ್ಮನನ್ನು ಮುಂದಿನ ವಾಕ್ಯ ಹೇಳಿ ಆವಾಹಿಸಬೇಕು.

(ಆವಾಹಿಸುವ ಮುಂಚೆ ಪೂಜಕನು ಕೈಯಲ್ಲಿ ಮಂತ್ರಾಕ್ಷತೆ - ಬಿಡಿಹೂಗಳನ್ನು ಹಿಡಿದುಕೊಂಡು -)

"ಪ್ರಸೀದ ಭಗವನ್ ಆಗಚ್ಛಾಗಚ್ಛ" "ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ವರುಣಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತಂ ಭಗವಂತಂ ಗಂಗಾಜನಕಂ ಶ್ರೀರಮಾ-ತ್ರಿವಿಕ್ರಮಂ ಅಸ್ಮಿನ್ ಕಲಶೇ ಆವಾಹಯಾಮಿ" ಎಂದು ಹೇಳಿ ಕೈಯಲ್ಲಿರುವ ಮಂತ್ರಾಕ್ಷತೆ - ಹೂಗಳನ್ನು ಕಲಶಕ್ಕೆ ಹಾಕಬೇಕು.

ತ್ರಿವಿಕ್ರಮನ ಉದ್ದೇಶವಾಗಿ ಷೋಡಶೋಪಚಾರಪೂಜೆಯನ್ನು ಮಾಡಬೇಕು. ಅನಂತರ ಅದೇ ಕಲಶದಲ್ಲಿ ಗಂಗೆಯನ್ನು ಮುಂದಿನ ಮಂತ್ರ ಹೇಳಿ ಆವಾಹಿಸಬೇಕು. (ಕೈಯಲ್ಲಿ ಮಂತ್ರಾಕ್ಷತೆ - ಹೂಗಳನ್ನು ಹಿಡಿದು ಮಂತ್ರ ಹೇಳಿ ಆವಾಹಿಸಿರಿ)

**ಗಂಗೇ ಚ ಯಮುನೇ ಕೃಷ್ಣೇ, ಗೋದಾವರಿ ಸರಸ್ವತಿ ।**
**ನರ್ಮದೇ ಸಿಂಧು ಕಾವೇರಿ, ಜಲೇಽಸ್ಮಿನ್ ಸನ್ನಿಧಿಂ ಕುರು ॥**

ಕಲಶಮಧ್ಯೇ ತ್ರಿವಿಕ್ರಮರೂಪಿಣಃ ಭಗವತಃ ಪುತ್ರೀಂ ಭಾಗೀರಥೀಂ ಆವಾಹಯಾಮಿ ।

ಭೂಃ ಭಾಗೀರಥೀಂ ಆವಾಹಯಾಮಿ । ಭುವಃ ಭಾಗೀರಥೀಂ ಆವಾಹಯಾಮಿ ।

ಸ್ವಃ ಭಾಗೀರಥೀಂ ಆವಾಹಯಾಮಿ । ಭೂರ್ಭುವಸ್ವಃ ಭಾಗೀರಥೀಂ ಆವಾಹಯಾಮಿ ।
(ಮಂತ್ರಾಕ್ಷತೆ ಪ್ರತ್ಯೇಕವಾಗಿ 5 ಬಾರಿ ಕಲಶಕ್ಕೆ ಹಾಕಬೇಕು)

ಗಂಗಾಯೈ ನಮಃ, ಧ್ಯಾನಂ ಸಮರ್ಪಯಾಮಿ । ಆವಾಹನಂ ಸಮರ್ಪಯಾಮಿ । ಪಾದ್ಯಂ ಸಮರ್ಪಯಾಮಿ । ಅರ್ಘ್ಯಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಮಧುಪರ್ಕಂ ಸಮರ್ಪಯಾಮಿ । ಪುನರಾಚಮನಂ ಸಮರ್ಪಯಾಮಿ । ಸ್ನಾನಂ ಸಮರ್ಪಯಾಮಿ ।

(ಇವುಗಳನ್ನು ಹೇಳುತ್ತಾ ಒಂದೊಂದು ಬಾರಿ ಮಂತ್ರಾಕ್ಷತೆಯನ್ನು ಕಲಶಕ್ಕೆ ಹಾಕಿರಿ)

ವಸ್ತ್ರಂ ಸಮರ್ಪಯಾಮಿ । (ಕಲಶಕ್ಕೆ ಗೆಜ್ಜವಸ್ತ್ರ ಅರ್ಪಿಸಿರಿ)

ಹರಿದ್ರಾಂ ಸಮರ್ಪಯಾಮಿ । (ಅರಿಷಿಣದಿಂದ ಪೂಜಿಸಿರಿ)

ಕುಂಕುಮಂ ಸಮರ್ಪಯಾಮಿ । (ಕುಂಕುಮದಿಂದ ಪೂಜಿಸಿರಿ)

ಗಂಧಂ ಸಮರ್ಪಯಾಮಿ । (ಗಂಧಾರ್ಥೇ ಅಕ್ಷತಾನ್ ಸಮರ್ಪಯಾಮಿ)
(ಎಂದು ಮಂತ್ರಾಕ್ಷತೆ ಹಾಕಿರಿ)

ಪುಷ್ಪಾಣಿ ಸಮರ್ಪಯಾಮಿ । (ಬಿಡಿಹೂಗಳನ್ನು ಅರ್ಪಣೆ ಮಾಡಿರಿ)

**ಅಥ ದ್ವಾದಶನಾಮ ಪೂಜಾಂ ಕರಿಷ್ಯೇ ॥**

ನಂದಿನ್ಯೈ ನಮಃ । ನಲಿನ್ಯೈ ನಮಃ । ಸೀತಾಯೈ ನಮಃ । ಮಾಲತ್ಯೈ ನಮಃ । ಮಲಾಪಹಾಯೈ ನಮಃ । ವಿಷ್ಣುಪಾದಾಬ್ಜಸಂಭೂತಾಯೈ ನಮಃ । ಗಂಗಾಯೈ ನಮಃ । ತ್ರಿಪಥಗಾಮಿನ್ಯೈ ನಮಃ । ಭಾಗೀರಥ್ಯೈ ನಮಃ । ಭೋಗವತ್ಯೈ ನಮಃ । ಜಾಹ್ನವ್ಯೈ ನಮಃ । ತ್ರಿದಶೇಶ್ವರ್ಯೈ ನಮಃ । ಗಂಗಾಭಾಗೀರಥ್ಯೈ ನಮಃ ॥ ದ್ವಾದಶನಾಮಪೂಜಾಂ ಸಮರ್ಪಯಾಮಿ ॥ (ಒಂದೊಂದು ನಾಮದಿಂದ ಮಂತ್ರಾಕ್ಷತೆಯನ್ನು ಕಲಶಕ್ಕೆ ಹಾಕಬೇಕು)

**ಧೂಪಾರತಿ ।**

ವನಸ್ಪತ್ಯುದ್ಭವೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।
ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಮ್ ॥
(ಈ ಮಂತ್ರದಿಂದ ಧೂಪಾರತಿಯನ್ನು ಮಾಡಬೇಕು)

[illegible] ।

[illegible]ಜ್ಯಂ ತ್ರಿವರ್ತಿಸಂಯುಕ್ತಂ, ವಹ್ನಿನಾ ದ್ಯೋತಿತಂ ಮಯಾ ।
ದೀಪಂ ಗೃಹಾಣ ದೇವೇಶ, ತ್ರೈಲೋಕ್ಯತಿಮಿರಾಪಹ ॥
(3 ಬತ್ತಿಯಿಂದ ಏಕಾರ್ತಿ ದೀಪವನ್ನು ಬೆಳಗಿ, ಶಮನಗೊಳಿಸಬೇಕು)

**ನೈವೇದ್ಯ ।**

ಶುದ್ಧೋದಕವನ್ನು ಉಪಯೋಗಿಸಿ ಮಾಡಿದ ಅಪೂಪ, ಪಾಯಸ ಮುಂತಾದ ಆಹಾರ ಪದಾರ್ಥಗಳನ್ನು ಮೊದಲು ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀರಮಾ-ತ್ರಿವಿಕ್ರಮನಿಗೆ ನಿವೇದನ ಮಾಡಿ, ಆಮೇಲೆ ಲಕ್ಷ್ಮೀದೇವಿ - ಪ್ರಾಣದೇವರಿಗೂ ನಿವೇದನ ಮಾಡುವ ಅನುಸಂಧಾನ ಮಾಡಿ, ಆನಂತರ ಬೇರೆ ಪಾತ್ರೆ (ತಟ್ಟೆಯೊಂದರಲ್ಲಿ ಗಂಗೆಗೆ ನೈವೇದ್ಯ ಬಡಿಸಿ ನಿವೇದಿಸಬೇಕು. ನೈವೇದ್ಯಕ್ಕೆ ಅಭಿಘಾರ ಮಾಡಿ ತುಳಸೀದಳ ಹಾಕಿ ಗಾಯತ್ರೀಮಂತ್ರದಿಂದ ನೀರನ್ನು ಸುತ್ತು ಕಟ್ಟಬೇಕು (ಪರಿಷೇಕ ಮಾಡಬೇಕು). ಆಮೇಲೆ ದೇವರಿಗೆ ಮಾಡಿದ ಮಂಗಳಾರತಿಯನ್ನು ಕಲಶಕ್ಕೆ ಹಂಡೆಗೆ ಮಾಡಬೇಕು)

**ಮಂಗಳಾರತಿ ಮಾಡುವಾಗ ಹೇಳುವ ಮಂತ್ರ ।**

ಜಯತಿ ಹರಿರಚಿಂತ್ಯಃ ಸರ್ವದೇವೈಕವಂದ್ಯಃ
ಪರಮಗುರುರಭೀಷ್ಟಾವಾಪ್ತಿದಃ ಸಜ್ಜನಾನಾಂ ।
ನಿಖಿಲ ಗುಣಗಣಾರ್ಣೋ ನಿತ್ಯನಿರ್ಮುಕ್ತದೋಷಃ
ಸರಸಿಜನಯನೋಽಸೌ ಶ್ರೀಪತಿರ್ಮಾನದೋ ನಃ ॥

**ಮಂತ್ರಪುಷ್ಪಾಂಜಲಿಃ ।**

ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ ।
ತನ್ನೋ ವಿಷ್ಣುಃ ಪ್ರಚೋದಯಾತ್ ॥
(ಎಂದು ಅಕ್ಷತೆ-ಹೂಗಳನ್ನು ಕಲಶದ ಮೇಲೆ ಹಾಕಬೇಕು)

**ಗಂಗಾಪ್ರಾರ್ಥನಾ ।**

ಹೇ ಗಂಗೇ ತವಕೋಮಲಾಂಘ್ರಿ ನಲಿನಂ ರಂಭೋರು ನೀವಿಲಸತ್
ಕಾಂಚೀ ದಾಮ ತನೂದರಂ ಘನಕುಚ ವ್ಯಾಕೀರ್ಣಹಾರಂ ವಪುಃ ।
ಸನ್ಮುದ್ರಾಂಗದ ಕಂಕಣಾವೃತ ಕರಂ ಸ್ಮೇರಂ ಸ್ಫುರತ್ಕುಂಡಲಂ
ಸಾರಂಗಾಕ್ಷಿ ಜಲಾನ್ಯದಿಂದುರುಚಯೇ ಜಾನಂತಿ ತೇಽನ್ಯೇ ಜಲಾತ್ ॥
ಗಂಗಾಯೈ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥

**ಸಮಾಪನಮ್ ।**

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾ ಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ।
ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಕೃತಂ ತು ಮಯಾದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯ-ಪ್ರಾಣಾಂತರ್ಗತ ಗಂಗಾಜನಕ ಶ್ರೀರಮಾ-ತ್ರಿವಿಕ್ರಮಾಭಿನ್ನ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ಸುಪ್ರೀತೋ ವರದೋ ಭವತು ॥

(ಪೂಜಿಸಿದ ಕಲಶದ ನೀರನ್ನು ಮಂಗಲವಾದ್ಯಗಳನ್ನು ಮೊಳಗಿಸುತ್ತಾ ಬಿಸಿನೀರ ಹಂಡೆಗೆ ಹಾಕಬೇಕು)

॥ ಶ್ರೀಕೃಷ್ಣಾರ್ಪಣಮಸ್ತು ॥

## ವ್ಯೋಮದೀಪಪ್ರಜ್ವಲನಮ್

(ಸೂರ್ಯಾಸ್ತವಾದ ಮೇಲೆ ಮನೆಯ ಮುಂದೆ ಪುರುಷ ಪ್ರಮಾಣದ ಯಜ್ಞೀಯ ಕಾಷ್ಠದಿಂದ ನಿರ್ಮಿತವಾದ ಒಂದು ಕೋಲನ್ನು ಭೂಮಿಯಲ್ಲಿ ನೆಟ್ಟು, ಅದರ ತುದಿಯಲ್ಲಿ ಅಷ್ಟದಲ ಮುಂತಾದ ಆಕಾರಗಳಿಂದ ಮಾಡಿದ ಆಕಾಶಬುಟ್ಟಿಯನ್ನಿಟ್ಟು ಅದರ ಮಧ್ಯದಲ್ಲಿ ಎಳ್ಳೆಣ್ಣೆ ದೀಪವನ್ನು ಹಚ್ಚಿಡಬೇಕು)

'ದಾಮೋದರಾಯ ನಭಸಿ ತುಲಾಯಾಂ ರಾಧಯಾ ಸಹ ।
ಪ್ರದೀಪಂ ತೇ ಪ್ರಯಚ್ಛಾಮಿ ನಮೋಽನಂತಾಯ ವೇದಸೇ ॥'

(ಈ ಮಂತ್ರವನ್ನು ಹೇಳಿ ಒಂದು ತಿಂಗಳು ಪೂರ್ತಿ "ಆಕಾಶದೀಪ"ವನ್ನು ಹಚ್ಚಿದರೆ ಮಹಾಸಂಪತ್ತು ಲಭಿಸುತ್ತದೆ)

## ಯಮದೀಪದಾನಮ್

ಜಲಪೂರಣ ತ್ರಯೋದಶೀಯಂದು ಅಪಮೃತ್ಯುನಿವಾರಣೆಗಾಗಿ ಮುಸ್ಸಂಜೆಯಲ್ಲಿ (ಸೂರ್ಯಾಸ್ತವಾದ ಮೇಲೆ) ಮನೆಯ ಹೊರಭಾಗದಲ್ಲಿ ಎತ್ತರದ ಜಾಗದಲ್ಲಿ ಯಮದೇವರ ಪ್ರೀತಿಗಾಗಿ ದೀಪವನ್ನು ಇಡಬೇಕು.

*ವಿ.ಸೂ. : ಇಂದಿನಿಂದ ಕಾರ್ತೀಕ ಮಾಸಾಂತ್ಯದವರೆಗೂ ತುಳಸೀಕಟ್ಟೆ ಹಾಗೂ ಕೊಟ್ಟಿಗೆ (ಹಟ್ಟಿ)ಗಳಲ್ಲಿ ದೀಪ ಹಚ್ಚಬೇಕು.*

॥ ಇತಿ ಜಲಪೂರಣ ತ್ರಯೋದಶೀ ಸಂಪೂರ್ಣಾ ॥

* * *

# ನರಕಚತುರ್ದಶ್ಯಾಂ ತೈಲಾಭ್ಯಂಗ ವಿಧಿಃ

## (ಆಶ್ವಯುಜಮಾಸ ಕೃಷ್ಣಪಕ್ಷ ಚತುರ್ದಶೀ)

ಆಶ್ವಯುಜ ಮಾಸದ ಕೃಷ್ಣಪಕ್ಷದ ಚತುರ್ದಶೀ ದಿನದಂದು ಚಂದ್ರೋದಯ ಕಾಲದಲ್ಲಿ ತೈಲಾಭ್ಯಂಜನ ಮಾಡಬೇಕು. ರಾತ್ರಿಯ ನಾಲ್ಕನೇ ಜಾವದಲ್ಲಿ ಚತುರ್ದಶೀ ತಿಥಿ ಇರಬೇಕು. ಸೂರ್ಯೋದಯ ಸಮಯದಲ್ಲಿ ಅಮಾವಾಸ್ಯೆ ತಿಥಿ ಬಂದಿದ್ದರೂ ಯಾವ ದೋಷವೂ ಇಲ್ಲ. ಆಶ್ವಯುಜ ಬಹುಳ ಚತುರ್ದಶಿಯಂದು ಹರಿದ್ವೇಷಿಯಾದ ನರಕಾಸುರನನ್ನು ಸಂಹರಿಸಿದ ಶ್ರೀಕೃಷ್ಣನಿಗೆ ಸಂತೋಷದ್ಯೋತಕವಾಗಿ ದೇವತೆಗಳು ರನ್ನದಾರತಿಯನ್ನು ಬೆಳಗಿದರು. ನರಕಾಸುರನ ಬಂಧನದಿಂದ ಮುಕ್ತರಾದ 16,100 ಸ್ತ್ರೀಯರು ತಮ್ಮ ಕಣ್ಣಾಲಿಗಳಿಂದ ಶ್ರೀಕೃಷ್ಣನನ್ನು ಆಪಾದಮೌಲಿಪರ್ಯಂತ ಅವಲೋಕಿಸುವುದರ ಮೂಲಕ ಆರತಿ ಬೆಳಗಿದರು. ಅದರ ಸಂಕೇತವಾಗಿ ನರಕಚತುರ್ದಶೀಯಂದು ನಾರೀಕೃತ ನೀರಾಜನ ಮಾಡುವ ಪದ್ಧತಿಯು ಅವ್ಯಾಹತವಾಗಿ ನಡೆದುಬರುತ್ತಿದೆ.

ಆಚಮನ, ಪ್ರಾಣಾಯಾಮ, ಸಂಕಲ್ಪ ........ ಶುಭತಿಥೌ ಶ್ರೀಮದ್ರಾಘವೇಂದ್ರತೀರ್ಥ-ಗುರ್ವಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಸೀತಾಪತಿ ಶ್ರೀಮನ್ಮೂಲರಾಮಚಂದ್ರ ಪ್ರೇರಣಯಾ ಶ್ರೀಮನ್ಮೂಲರಾಮಚಂದ್ರ ಪ್ರೀತ್ಯರ್ಥಂ ಚತುರ್ದಶ್ಯಾಂ ಚಂದ್ರೋದಯಕಾಲೇ ನರಕಾಂತಕ ಶ್ರೀಗೋಪಾಲಕೃಷ್ಣಾತ್ಮಕ ಸೀತಾಪತಿ ಶ್ರೀಮೂಲರಾಮಚಂದ್ರಸ್ಯ ಸುಗಂಧಿ-ತೈಲಾಭ್ಯಂಗಸ್ನಾನ ಸಮರ್ಪಣಪೂಜಾಂ ಕರಿಷ್ಯೇ ॥ (ಎಂದು ಸಂಕಲ್ಪವಾಕ್ಯಗಳನ್ನು ಹೇಳಿ ಮಂತ್ರಾಕ್ಷತೆ ನೀರನ್ನು ಅರ್ಘ್ಯಪಾತ್ರೆಗೆ ಬಿಡಬೇಕು)

ನರಕಚತುರ್ದಶಿಯಂದು ಚಂದ್ರೋದಯದ ಸಮಯದಲ್ಲಿ ಸೊಂಟದವರೆಗೆ ಮಾತ್ರ ಮಿಂದು ಬೇರೆ ವಸ್ತ್ರವೊಂದನ್ನು ಧರಿಸಿಕೊಂಡು ಹಿಂದಿನ ರಾತ್ರಿ ಪೂಜಿಸಿ, ಬಿಸಿನೀರ ಹಂಡೆಗೆ ಹಾಕಿದ ನೀರನ್ನು, ಪಾತ್ರೆಯೊಂದರಲ್ಲಿ ಸ್ವಲ್ಪ ತೆಗೆದುಕೊಂಡು ಬಿಸಿನೀರಿನ ಆ ಬಟ್ಟಲನ್ನು, ಸುಗಂಧತೈಲ, ಎಳ್ಳೆಣ್ಣೆ (ಅಥವಾ ಕೊಬ್ಬರಿಎಣ್ಣೆ), ಗರಿಕೆಯ ಗುಚ್ಛವನ್ನು ಮಾಡಿ ಇವುಗಳನ್ನೆಲ್ಲಾ ದೇವರ ಮುಂಭಾಗದಲ್ಲಿ ಚೌಕಮಂಡಲ ಮಾಡಿ ಅದರೊಳಗೆ ಇಡಬೇಕು.

ಎಣ್ಣೆಯಲ್ಲಿ ಲಕ್ಷ್ಮೀದೇವಿಯನ್ನು, ನೀರಿನಲ್ಲಿ ಗಂಗೆಯನ್ನು ಹಾಗೂ ಅವರಂತರ್ಯಾಮಿ ಶ್ರೀಕೃಷ್ಣನನ್ನು ಸ್ಮರಿಸಬೇಕು. ಅನಂತರ ಅರ್ಘ್ಯಪಾದ್ಯಾದಿ ಉಪಚಾರಗಳನ್ನರ್ಪಿಸಿ -

**ಓಂ ಕನಿಕ್ರದಜ್ಜನುಷಂ ಪ್ರಬ್ರುವಾಣ ಇಯರ್ತಿನಾವ ಮರಿತೇವ ನಾವಂ ।**
**ಸುಮಂಗಲಶ್ಚ ಶಕುನೇ ಭವಾಸಿ ಮಾ ತ್ವಾ ಕಾಚಿದಭಿಭಾವಿಶ್ವ್ಯಾ ವಿದತ್ ॥**

ಎಂಬ ಮಂತ್ರವನ್ನು ಹೇಳುತ್ತಾ ಮಂಗಲವಾದ್ಯ ಧ್ವನಿಗಳೊಡನೆ ಶ್ರೀಕೃಷ್ಣನು ಸಪರಿವಾರನಾಗಿ ಪೂಜಿತನಾಗಿರುವನೆಂದು ಅನುಸಂಧಾನ ಮಾಡಬೇಕು. ಕೇಶವಾದಿ 24 ನಾಮಗಳಿಂದ ಪುಷ್ಪಾರ್ಚನೆ, ನೈವೇದ್ಯ, ಮಂಗಳಾರತಿ ಮಾಡಿ ಕೃಷ್ಣಾರ್ಪಣ ಬಿಡುವುದು.

ನರಕಚತುರ್ದಶಿಯಂದು ಪ್ರತಿಯೊಬ್ಬರೂ ಚಂದ್ರೋದಯ ಸಮಯಕ್ಕೆ ಸುವಾಸಿನಿ ಸ್ತ್ರೀಯರಿಂದ ದೇವರಿಗೆ, ತುಳಸಿಗೆ, ಗೋವುಗಳಿಗೆ, ಗುರುಗಳಿಗೆ ಮಾಡಿದ ದೀಪದ ನೀರಾಜನದಿಂದ ಆರತಿ ಮಾಡಿಸಿಕೊಳ್ಳಬೇಕು. ಅನಂತರ -

**ಅಶ್ವತ್ಥಾಮಾ ಬಲಿರ್ವ್ಯಾಸೋ ಹನೂಮಾಂಶ್ಚ ವಿಭೀಷಣಃ ।**
**ಕೃಪಃ ಪರಶುರಾಮಶ್ಚ ಸಪ್ತೈತೇ ಚಿರಜೀವಿನಃ ॥**

**ಮಾರ್ಕಂಡೇಯ ಮಹಾಭಾಗ ಸಪ್ತಕಲ್ಪಾಂತಜೀವನ ।**
**ಆಯುರಾರೋಗ್ಯಮೈಶ್ವರ್ಯಂ ದೇಹಿ ಮೇ ಮುನಿಪುಂಗವ ॥**
**ನಮಃ ಚಿರಜೀವಿಭ್ಯಃ । ಆಯುರಾರೋಗ್ಯೈಶ್ವರ್ಯಾಭಿವೃದ್ಧಿಂ ಕುರ್ವಂತು ॥**

ಎಂದು ಪ್ರಾರ್ಥಿಸಿ ದೇವರಿಗೆ ಅರ್ಪಿತವಾದ ಎಣ್ಣೆಯನ್ನು ಚಿರಜೀವಿಗಳ ಸ್ಮರಣೆ ಮಾಡುತ್ತಾ ಗರಿಕೆಯ ಕಟ್ಟಿನಿಂದ ನೆಲಕ್ಕೆ 7 ಬಾರಿ ಮುಟ್ಟಿಸಬೇಕು. ಅನಂತರ ಮೊದಲು ಭೂಮಿ, ನಂತರ ತಲೆಗೆ ಹೀಗೆ 3 ಬಾರಿ ಎಣ್ಣೆಯನ್ನು ಗರಿಕೆಯಿಂದ ಹಚ್ಚಬೇಕು. ಆಮೇಲೆ ಅಂಗಾಗಗಳಿಗೆಲ್ಲಾ ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡಬೇಕು. ಇಂದು ಅಭ್ಯಂಜನ ಸ್ನಾನವನ್ನು ಪ್ರತಿಯೊಬ್ಬರೂ ಮಾಡಲೇಬೇಕು. (ವ್ರತಿಗಳು, ವಿಧವೆಯರು, ಸನ್ಯಾಸಿಗಳೂ ಕೂಡ ಅತ್ಯವಶ್ಯವಾಗಿ ಅಭ್ಯಂಜನವನ್ನು ಮಾಡಿಕೊಳ್ಳಬೇಕು) ಹೇಗೆ ಭಗವಂತ ದುಷ್ಟಶಕ್ತಿಯನ್ನು ಮರ್ದನ ಮಾಡಿ ಎಲ್ಲರಿಗೂ ಆನಂದಪಡಿಸಿದನೋ, ಹಾಗೆಯೇ ನಾವು ನಮ್ಮ ಇಂದ್ರಿಯಗಳಿಗೂ ಎಣ್ಣೆಯುಡಿಸಿ ಆನಂದಪಡಿಸಲು ತೈಲಾಭ್ಯಂಜನ ಮಾಡಬೇಕು.

ಅಭ್ಯಂಗಸ್ನಾನವಾದ ನಂತರ ಯಮತರ್ಪಣವನ್ನು ತಂದೆಯಿದ್ದವರು ಸವ್ಯದಿಂದಲೂ, ಇಲ್ಲದವರು ಅಪಸವ್ಯದಿಂದಲೂ ಅಕ್ಷತೆಸಹಿತವಾಗಿ ದೇವತೀರ್ಥದಿಂದ ಪೂರ್ವಕ್ಕೆ ಮುಖಮಾಡಿಕೊಂಡು ಮೂರು-ಮೂರು ಸಾರಿ ಬಿಡಬೇಕು.

ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ................ ಮಮ ನರಕಭಯನಿರಾಸದ್ವಾರಾ ವಿಷ್ಣುಪ್ರೀತ್ಯರ್ಥಂ ಯಮತರ್ಪಣಂ ಕರಿಷ್ಯೇ । ಯಮಂ ತರ್ಪಯಾಮಿ । ಧರ್ಮರಾಜಂ ತರ್ಪಯಾಮಿ । ಮೃತ್ಯುಂ ತರ್ಪಯಾಮಿ । ಅಂತಕಂ ತರ್ಪಯಾಮಿ । ವೈವಸ್ವತಂ ತರ್ಪಯಾಮಿ । ಕಾಲಂ ತರ್ಪಯಾಮಿ । ಸರ್ವಭೂತಕ್ಷಯಂ ತರ್ಪಯಾಮಿ । ಔದುಂಬರಂ ತರ್ಪಯಾಮಿ । ದಧ್ನಂ ತರ್ಪಯಾಮಿ । ನೀಲಂ ತರ್ಪಯಾಮಿ । ಪರಮೇಷ್ಠಿನಂ ತರ್ಪಯಾಮಿ । ವೃಕೋದರಂ ತರ್ಪಯಾಮಿ । ಚಿತ್ರಂ ತರ್ಪಯಾಮಿ । ಚಿತ್ರಗುಪ್ತಂ ತರ್ಪಯಾಮಿ ॥

**ಯಮೋ ನಿಹಂತಾ ಪಿತೃಧರ್ಮರಾಜೋ ವೈವಸ್ವತೋ ದಂಡಧರಶ್ಚ ಕಾಲಃ ।**
**ಭೂತಾಧಿಪೋ ದತ್ತಕೃತಾನುಸಾರೀ ಕೃತಾಂತಕಶ್ಚೇತಿ ಸಕೃಜ್ಜಪಂತಿ ॥**

ಈ ಶ್ಲೋಕವನ್ನು ಪಠಿಸಬೇಕು.

ಅನೇನ ಯಮತರ್ಪಣೇನ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಯಮಾಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಃ ಪ್ರೀಯತಾಮ್ ।

ನಂತರ ಹೊಸ ಬಟ್ಟೆ ಧರಿಸಿ ದೇವರಿಗೂ, ಗುರು-ಹಿರಿಯರಿಗೂ ವಂದನೆ ಸಲ್ಲಿಸಬೇಕು. ಇಲ್ಲದಿದ್ದಲ್ಲಿ ದಾರಿದ್ರ್ಯಾದಿಗಳು ಒದಗುವುವು. ನೂತನ ವಸ್ತ್ರಗಳನ್ನು ಯಥಾಶಕ್ತಿ ದಾನ ಮಾಡಬೇಕು. ಈ ದಾನದಿಂದ ಯಶಸ್ಸು, ಪುತ್ರ, ಐಶ್ವರ್ಯ ಮುಂತಾದವು ದೊರೆಯುವುವು.

ವಿ.ಸೂ. : ಸ್ನಾನ ಮಾಡುವಾಗ ಉತ್ತರಣೆ ಹಾಗೂ ತುಂಬೆ, ಗರಿಕೆ ಇವುಗಳಿಂದ ತಲೆಯಿಂದಾರಂಭಿಸಿ ಇಡೀ ದೇಹಕ್ಕೆ ಸುತ್ತು ಹಾಕಿಕೊಂಡು ದೂರ ಎಸೆಯಬೇಕು.

## ಉಲ್ಕಾದೀಪ ಪ್ರಜ್ವಾಲನಮ್

ನರಕಚತುರ್ದಶಿ ಮತ್ತು ದೀಪಾವಳಿ ಅಮಾವಾಸ್ಯೆ ಈ ಎರಡು ದಿನ ಪ್ರದೋಷಕಾಲದಲ್ಲಿ "ಉಲ್ಕಾದೀಪ"ವನ್ನು ಪ್ರಜ್ವಲಿಸಿ,

**"ಅಗ್ನಿದಗ್ಧಾಶ್ಚ ಯೇ ಜೀವಾ ಯೇಽಪ್ಯದಗ್ಧಾಃ ಕುಲೇ ಮಮ ।**
**ಉಜ್ವಲ ಜ್ಯೋತಿಷಾವರ್ತ್ಮ ಪ್ರಪಶ್ಯಂತು ವ್ರಜಂತು ತೇ ॥**
**ಯಮಲೋಕಂ ಪರಿತ್ಯಜ್ಯ ಆಗತಾ ಯೇ ಮಹಾಲಯೇ ।**
**ಉಜ್ವಲ ಜ್ಯೋತಿಷಾ ದಗ್ಧಾಃ ತೇ ಯಾಂತು ಪರಮಾಂ ಗತಿಮ್ ॥"**

ಹೀಗೆ ಹೇಳಿ ಪಿತೃಗಳಿಗೆ ಮಾರ್ಗದರ್ಶನ ಮಾಡಬೇಕು. ಈ ದಿನ ರಾತ್ರಿಯಲ್ಲಿ ಭೋಜನವನ್ನು ಅವಶ್ಯ ಮಾಡಲೇಬೇಕು.

॥ ಇತಿ ನರಕಚತುರ್ದಶೀ ಸಂಪೂರ್ಣಾ ॥

* * *

## ಲಕ್ಷ್ಮೀಪೂಜೆ

### (ಆಶ್ವಯುಜಮಾಸ ಅಮಾವಾಸ್ಯೆ - ರಾತ್ರಿಕಾಲ)

ಇಂದು ಲಕ್ಷ್ಮೀದೇವಿಯನ್ನು ಪತಿಸಹಿತವಾಗಿ ಶ್ರೀಸೂಕ್ತಾದಿಗಳಿಂದ ವಿಶೇಷವಾಗಿ ಪೂಜಿಸಬೇಕು.

**ಲಕ್ಷ್ಮೀ ಪ್ರಾರ್ಥನೆ**

ನಮಸ್ತೇ ಸರ್ವದೇವಾನಾಂ ವರದಾಸಿ ಹರಿಪ್ರಿಯೇ ।
ಯಾ ಗತಿಃ ತ್ವತ್ಪ್ರಪನ್ನಾನಾಂ ಸಾ ಮೇ ಭೂಯಾತ್ ತ್ವದರ್ಚನಾತ್ ॥

**ಕುಬೇರ ಪ್ರಾರ್ಥನೆ**

ಧನದಾಯ ನಮಸ್ತುಭ್ಯಂ ನಿಧಿಪದ್ಮಾಧಿಪಾಯ ಚ ।
ಭವಂತು ತ್ವತ್ಪ್ರಸಾದಾನ್ಮೇ ಧನಧಾನ್ಯಾದಿ ಸಂಪದಃ ॥
ಎಂದು ಪ್ರಾರ್ಥಿಸಬೇಕು.

**ದೀಪ ಪೂಜೆ**

ಭೋ ದೀಪ ಬ್ರಹ್ಮರೂಪಸ್ತ್ವಂ ಅಂಧಕಾರನಿವಾರಕ ।
ಇಮಾಂ ಮಯಾ ಕೃತಾಂ ಗೃಹ್ಣನ್ ತೇಜಃ ಮಯಿ ಪ್ರವರ್ತಯ ॥

ದೀಪಾವಲೀಂ ಮಯಾ ದತ್ತಾಂ ಗೃಹಾಣ ಜಗದೀಶ್ವರ ।
ಆರಾರ್ತಿಕ್ಯ ಪ್ರದಾನೇನ ಜ್ಞಾನದೃಷ್ಟಿ ಪ್ರದೋಭವ ॥

ಅಗ್ನಿರ್ಜ್ಯೋತೀರ್ರವಿರ್ಜ್ಯೋತಿಃ ಚಂದ್ರಜ್ಯೋತಿಃ ತಥೈವ ಚ ।
ಉತ್ತಮಃ ಸರ್ವತೇಜಸ್ಸು ದೀಪೋಽಯಂ ಪ್ರತಿಗೃಹ್ಯತಾಮ್ ॥

ಈ ಮಂತ್ರಗಳನ್ನು ಹೇಳುತ್ತಾ ದೀಪಗಳನ್ನು ಹಚ್ಚಿ ಪೂಜಿಸಬೇಕು.

॥ ಇತಿ ಲಕ್ಷ್ಮೀಪೂಜಾ ಸಮಾಪ್ತಾ ॥

* * *

# ಬಲೀಂದ್ರಪೂಜಾ

## (ಕಾರ್ತಿಕಮಾಸ ಶುಕ್ಲಪಕ್ಷ ಪ್ರತಿಪದ)

ಕಾರ್ತೀಕ ಶುದ್ಧ ಪಾಡ್ಯದ ದಿವಸ ವಾಮನರೂಪಿ ಭಗವಂತನು ಅವತರಿಸಿ, ಬಲಿಚಕ್ರವರ್ತಿಯನ್ನು ದಮನಮಾಡಿ ಪಾತಾಳಕ್ಕೆ ಕಳುಹಿಸಿದ ದಿನ. ರುಕ್ಮಿಣಿಯು ಪರಮಾತ್ಮನಿಗೆ ಸ್ನಾನಗೃಹದಲ್ಲಿ ಅಭ್ಯಂಜನಸ್ನಾನಾನಂತರ ಆರತಿ ಮಾಡುತ್ತಾಳೆ. ಹಾಗೇ ಪ್ರತಿ ಗೃಹದಲ್ಲಿಯೂ ಗಂಡಸರು ಅಭ್ಯಂಜನಸ್ನಾನ ಮಾಡಿದ ನಂತರ ಸ್ನಾನಗೃಹದಲ್ಲೇ ಹೆಣ್ಣುಮಕ್ಕಳು ಆರತಿಯನ್ನು ಮಾಡುವರು. ಇಂದು ಗೋಮಯದಿಂದ ಪಾಂಡವರನ್ನು ಮಾಡಿ (ಹಸುವಿನ ಸಗಣಿಯಿಂದ 5 ಕುಂತಿಗಳನ್ನು ಮಾಡಿ) ಅದರೊಳಗೆ ಪಂಚಪಾಂಡವರನ್ನು ಆವಾಹನೆ ಮಾಡಿ ಪೂಜಿಸಬೇಕು. ಪಾಂಡವರು ಅಜ್ಞಾತವಾಸ ಮುಗಿಸಿದ ದಿವಸವಾದ್ದರಿಂದ ಅದರ ನೆನಪಿಗೆ ಈ ಪೂಜೆಯು ವಿಹಿತವಾಗಿದೆ.

\+ + +

ಕಾರ್ತೀಕ ಶುದ್ಧ ಪಾಡ್ಯದ ದಿವಸ ಬಿಳಿ ರಂಗೋಲಿಯಿಂದ ಹನ್ನೆರಡು ದಳಗಳ ಪದ್ಮವನ್ನು ಬರೆದು, ಅದರೊಳಗೆ ಬಲೀಂದ್ರನ ಚಿತ್ರವನ್ನು ರಚಿಸಿ, ಆ ಬಲೀಂದ್ರನಲ್ಲಿ ವಾಮನರೂಪಿ ಪರಮಾತ್ಮನ ಪೂಜೆಯನ್ನು ಮಾಡಬೇಕು.

ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ................ ಸರ್ವಸಂಪದ-ಭಿವೃದ್ಧ್ಯರ್ಥಂ ಬಲೀಂದ್ರಾಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀ-ರಮಣಮುಖ್ಯಪ್ರಾಣಾಂತರ್ಗತ ಶ್ರೀವೃಷಾಕಪಿಪತಿ ವಾಮನಪೂಜಾಂ ಕರಿಷ್ಯೇ ॥ ಎಂದು ಸಂಕಲ್ಪ ಮಾಡಿ ಷೋಡಶೋಪಚಾರಗಳಿಂದ ಪೂಜಿಸಬೇಕು. ನಂತರ,

ಶ್ರೀಭೂಮಿಸಹಿತಂ ದಿವ್ಯಂ ಮುಕ್ತಾಹಾರ ವಿಭೂಷಿತಮ್ ।
ನಮಾಮಿ ವಾಮನಂ ವಿಷ್ಣುಂ ಭುಕ್ತಿಮುಕ್ತಿ ಫಲಪ್ರದಮ್ ॥

ಎಂದು ವಾಮನನನ್ನು ಪ್ರಾರ್ಥಿಸಬೇಕು. ನಂತರ ಬಲಿಯನ್ನು ಈ ಕೆಳಗಿನಂತೆ ಪ್ರಾರ್ಥಿಸಬೇಕು.

ಬಲಿರಾಜ ನಮಸ್ತುಭ್ಯಂ ವಿರೋಚನ ಸುತ ಪ್ರಭೋ ।
ಭವಿಷ್ಯೇಂದ್ರ ಸುರಾರಾತೇ ಪೂಜೋಽಯಂ ಪ್ರತಿಗೃಹ್ಯತಾಮ್ ॥

ಬಲಿರಾಜ ನಮಸ್ತುಭ್ಯಂ ದೈತ್ಯ ದಾನವ ವಂದಿತ ।
ಇಂದ್ರ ಶತ್ರೋಽಮರಾರಾತೇ ವಿಷ್ಣು ಸಾನ್ನಿಧ್ಯದೋ ಭವ ॥

॥ ಇತಿ ಬಲೀಂದ್ರಪೂಜಾ ಸಮಾಪ್ತಾ ॥



## ಯಮದ್ವಿತೀಯಾ

(ಕಾರ್ತೀಕ ಶುದ್ಧ ದ್ವಿತೀಯಾ)

**ಪೀಠಿಕೆ :**

ಈ ದಿನದಂದು ಯಮದೇವರು ತನ್ನ ತಂಗಿಯಾದ ಯಮುನೆಯ ಮನೆಗೆ ಹೋಗಿ ಭೋಜನ ಮಾಡಿ ಹರಸಿ ಬಂದಿದ್ದಾರೆ. ಆದಕಾರಣ, ಈ ದಿನ ಯಮ ಮತ್ತು ಚಿತ್ರಗುಪ್ತರನ್ನು ಪೂಜಿಸಬೇಕು. ಪ್ರಾಚೀನ ಸಂಪ್ರದಾಯವನ್ನು ಇಂದೂ ಭಾರತೀಯರು ಆಚರಿಸುತ್ತಾರೆ. ಈ ದಿನದಂದು ಅಣ್ಣ-ತಮ್ಮಂದಿರು, ಅಕ್ಕ-ತಂಗಿಯರ ಮನೆಗೆ ಹೋಗಿ ಭೋಜನ ಮಾಡಬೇಕು. ಇದನ್ನು ಭಾವನ ಬಿದಿಗೆಯೆಂದು ಕರೆಯುತ್ತಾರೆ. ಇದರಿಂದ ಸಹೋದರರಿಗೆ ಆಯುಷ್ಯವೃದ್ಧಿಯೂ, ಸಹೋದರಿಯರಿಗೆ ಸೌಭಾಗ್ಯವೂ ಉಂಟಾಗುತ್ತದೆ. ಈ ದಿವಸ ಅಣ್ಣ-ತಮ್ಮಂದಿರಿಗೆ ಊಟ ಹಾಕುವಾಗ ಅಕ್ಕ-ತಂಗಿಯರು ಈ ಕೆಳಗಿನ ಶ್ಲೋಕವನ್ನು ಹೇಳಬೇಕು :

**ಶ್ಲೋಕಃ ।**

**ಭ್ರಾತಃ! ತವಾನುಜಾತಾಹಂ ಭುಂಕ್ಷ್ವ ಭಕ್ತಮಿದಂ ಶುಭಮ್ ।**
**ಪ್ರೀತಯೇ ಯಮರಾಜಸ್ಯ ಯಮುನಾಯಾಃ ವಿಶೇಷತಃ ॥**

(ಅಕ್ಕ, ತಮ್ಮನಿಗೆ ಊಟ ಹಾಕುವುದಾದರೆ 'ಭ್ರಾತಃ! ತವಾಗ್ರಜಾತಾಹಂ' ಎಂದು ಶ್ಲೋಕದ ಮೊದಲಿನ ಸಾಲಿನ ಅರ್ಧಭಾಗವನ್ನು ಬದಲು ಮಾಡಿಕೊಳ್ಳಬೇಕು)



## ॥ಪ್ರಬೋಧೋತ್ಸವಃ, ತುಲಸೀವಿವಾಹಃ, ತುಲಸೀಪೂಜಾಪದ್ಧತಿಶ್ಚ॥

### (ಕಾರ್ತಿಕಮಾಸ ಶುಕ್ಲಪಕ್ಷ ದ್ವಾದಶೀ)

ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತ್ಯ, ಏವಂಗುಣವಿಶೇಷಣ-ವಿಶಿಷ್ಟಾಯಾಂ ಶುಭತಿಥೌ ತುಲಸ್ಯಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಕಾರ್ತೀಕರಾಧಾದಾಮೋದರಪ್ರೇರಣಯಾ ಶ್ರೀಕಾರ್ತಿಕರಾಧಾದಾಮೋದರಪ್ರೀತ್ಯರ್ಥಂ ಪ್ರಬೋಧೋತ್ಸವಂ ತುಲಸೀವಿವಾಹವಿಧಿಂ ಚ ಕರಿಷ್ಯೇ ॥

ತದಂಗತ್ವೇನ ಶಂಖಪೂಜಾಂ, ಕಲಶಪೂಜಾಂ, ಪೀಠಪೂಜಾಂ ಚ ಕರಿಷ್ಯೇ (ಮಂತ್ರಾಕ್ಷತೆ ನೀರನ್ನು ಬಿಡಿ), ಗಣಪತಿಯನ್ನು ವಕ್ರತುಂಡ ಮಂತ್ರದಿಂದ ಪ್ರಾರ್ಥಿಸಬೇಕು. ತುಳಸಿಕಟ್ಟೆಯೊಳಗೆ ಶ್ರೀಕೃಷ್ಣ ಪ್ರತಿಮೆಯನ್ನಿಟ್ಟು ದೇವರು ಮತ್ತು ತುಳಸಿ ಸನ್ನಿಧಿಯಲ್ಲಿ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು.

ತತಃ ದೇವಸ್ಯ ಕಲಶಪೂಜಾದಿ ಮಧುಪರ್ಕಪೂಜಾಂತಂ ಕೃತ್ವಾ ಸುಗಂಧತೈಲಾದಿನಾ ಅಭ್ಯಂಗಪೂರ್ವಕಂ ಮಂಗಲಸ್ನಾನಂ ಕಾರಯಿತ್ವಾ, ಪಂಚಾಮೃತಸ್ನಾನಾದಿ ರಮಾನೈವೇದ್ಯಾಂತಂ ಕೃತ್ವಾ ತುಲಸೀಂ ಪ್ರಪೂಜಯೇತ್ ॥

**ಧ್ಯಾನಮ್ ।**

(ಕೈಯಲ್ಲಿ ಹೂ-ಮಂತ್ರಾಕ್ಷತೆಗಳನ್ನು ಹಿಡಿದುಕೊಂಡು)

ಯಾ ದೃಷ್ಟ್ವಾ ನಿಖಿಲಾಘಸಂಘಶಮನೀ ಸ್ಪೃಷ್ಟ್ವಾ ವಪುಃ ಪಾವನೀ
ರೋಗಾಣಾಂ ಅಭಿವಂದಿತಾ ನಿರಸನೀ ಸಿಕ್ತಾಂತಕ ತ್ರಾಸಿನೀ ।
ಪ್ರತ್ಯಾಸತ್ತಿವಿಧಾಯಿನೀ ಭಗವತಃ ಕೃಷ್ಣಸ್ಯ ಸಂರೋಪಿತಾ
ನ್ಯಸ್ತಾ ತಚ್ಚರಣೇ ವಿಮುಕ್ತಿ ಫಲದಾ ತಸ್ಯೈ ತುಲಸ್ಯೈ ನಮಃ ॥

ಧ್ಯಾಯಾಮಿ ತುಲಸೀಂ ದೇವೀಂ ಶ್ಯಾಮಾಂ ಕಮಲಲೋಚನಾಮ್ ।
ಪ್ರಸನ್ನಾಂ ಪದ್ಮಕಲ್ಹಾರವರಾಭಯಚತುರ್ಭುಜಾಮ್ ॥

ಕಿರೀಟಹಾರಕೇಯೂರಕುಂಡಲಾದಿ ವಿಭೂಷಿತಾಮ್ ।
ಧವಲಾಂಶುಕಸಂಯುಕ್ತಾಂ ಪದ್ಮಾಸನನಿಷೇದುಷೀಮ್ ॥

ದೇವಿ ತ್ರಿಲೋಕ ಜನನೀ ಸರ್ವಭೂತೈಕ ಪಾವನೀ ।
ಆಗಚ್ಛ ಭಗವತ್ಯತ್ರ ಪ್ರಸೀದ ತುಲಸೀ ಪ್ರಿಯೇ ॥
ತುಲಸ್ಯೈ ನಮಃ । ಧ್ಯಾಯಾಮಿ, ಧ್ಯಾನಂ ಸಮರ್ಪಯಾಮಿ ॥
(ಮಂತ್ರಾಕ್ಷತೆ ಮತ್ತು ಹೂಗಳನ್ನು ಹಾಕಿರಿ)

**ಆವಾಹನಮ್ ।**

ತುಲಸೀ ಶ್ರೀಸಖಿ ಶುಭೇ ಪಾಪಹಾರಿಣಿ ಪುಣ್ಯದೇ ।
ಆವಾಹಯಾಮಿ ತ್ವಾಂ ದೇವೀ ನಾರಾಯಣ ಮನಃ ಪ್ರಿಯೇ ॥
ಕೃಷ್ಣಾನಂದಾಶ್ರುಸಂಭೂತೇ ವರದೇ ತುಲಸೀ ಸ್ವಯಮ್ ।
ತ್ವಾಮದ್ಯಾಹಂ ಭಜಾಮೀಹ ಕಮಲಾಪತಿವಲ್ಲಭೇ ॥
ತುಲಸ್ಯೈ ನಮಃ । ಆವಾಹಯಾಮಿ । ಆವಾಹನಂ ಸಮರ್ಪಯಾಮಿ ।
(ಮಂತ್ರಾಕ್ಷತೆ ಹೂ ಹಾಕಿರಿ)

**ಆಸನಮ್ ।**

ಪದ್ಮನಾಭಪ್ರಿಯೇ ದೇವಿ ಪದ್ಮಮೇತನ್ಮಯಾರ್ಪಿತಮ್ ।
ಸಂಗೃಹಾಣಾಸನಂ ಶ್ಯಾಮೇ ವರದೇ ವರವರ್ಣಿನಿ ॥
ತುಲಸ್ಯೈ ನಮಃ । ಆಸನಂ ಸಮರ್ಪಯಾಮಿ ।
(ತುಳಸಿಗೆ ಮಂತ್ರಾಕ್ಷತೆ-ಹೂ ಹಾಕಿರಿ)

**ಪಾದ್ಯಮ್ ।**

ವೃಂದಾವನಸ್ಥಿತೇ ದೇವಿ ವೃಂದಾರಕ ಸುಪೂಜಿತೇ ।
ಇದಂ ಪಾದ್ಯಂ ಗೃಹಾಣ ತ್ವಂ ದೇವಿ ದೈತ್ಯಾಂತಕಪ್ರಿಯೇ ॥
ತುಲಸ್ಯೈ ನಮಃ । ಪಾದಯೋಃ ಪಾದ್ಯಂ ಸಮರ್ಪಯಾಮಿ ।
(ಕಲಶದ ನೀರನ್ನು ಉದ್ಧರಣೆಯಿಂದ ಎತ್ತಿಕೊಂಡು ದೇವಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು)

**ಅರ್ಘ್ಯಮ್ ।**

ಕ್ಷೀರೋದಧಿಸಮುತ್ಪನ್ನೇ ದೇವಾದಿಮುನಿಪೂಜಿತೇ ।
ವಿಷ್ಣುಪ್ರಿಯೇ ಮಯಾ ದತ್ತಂ ಗೃಹಾಣಾರ್ಘ್ಯಂ ನಮೋಽಸ್ತುತೇ ॥
ತುಲಸ್ಯೈ ನಮಃ । ಹಸ್ತಯೋಃ ಅರ್ಘ್ಯಂ ಸಮರ್ಪಯಾಮಿ ।
(ತುಳಸಿಗೆ ಮಂತ್ರಾಕ್ಷತೋದಕವನ್ನು ನೀಡಬೇಕು)

**ಆಚಮನಮ್ ।**

ಏಲಾ ಲವಂಗ ಕರ್ಪೂರ ಚಂದನಾದ್ಯೈಃ ಸುವಾಸಿತಮ್ ।
ಪಾನೀಯಂ ತೇ ಮಯಾನೀತಂ ಸಮ್ಯಗಾಚಮನೀಯಕಮ್ ॥
ತುಲಸ್ಯೈ ನಮಃ । ಮುಖೇ ಆಚಮನೀಯಂ ಸಮರ್ಪಯಾಮಿ ।
(ಕಲಶೋದಕ ತುಳಸಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು)

**ಮಧುಪರ್ಕಃ ।**

ದಾಮೋದರಪ್ರಿಯೇ ದೇವಿ ದಧಿಕ್ಷೌರಸಮನ್ವಿತಮ್ ।
ಮಧುಪರ್ಕಂ ಗೃಹಾಣ ತ್ವಂ ಮಯಾ ದತ್ತಂ ಸುರೇಶ್ವರೀ ॥
ತುಲಸ್ಯೈ ನಮಃ । ಮಧುಪರ್ಕಂ ಸಮರ್ಪಯಾಮಿ।
(ಮೊಸರು, ಜೇನು, ತುಪ್ಪಗಳನ್ನು ಹೂವೊಂದರಿಂದ ಮುಟ್ಟಿ ಅರ್ಪಣೆ ಮಾಡಬೇಕು)

**ಪುನರಾಚಮನಮ್ ।**

ಸುರಾಸುರ ಪ್ರಪೂಜ್ಯಾಯೈ ತುಲಸ್ಯೈ ತೇ ನಮೋ ನಮಃ ।
ಪುನರಾಚಮನಂ ದೇವಿ ಗೃಹಾಣ ವರದಾ ಭವ ॥
ತುಲಸ್ಯೈ ನಮಃ । ಪುನರಾಚಮನಂ ಸಮರ್ಪಯಾಮಿ ।
(ಮೀಸಲು ನೀರನ್ನು ತುಳಸಿಗೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಬೇಕು)

**ಪಂಚಾಮೃತಸ್ನಾನಮ್ ।**

ದಧಿಕ್ಷೀರಘೃತೋಪೇತಂ ಶರ್ಕರಾಮಧುಸಂಯುತಮ್ ।
ಸ್ನಾನಂ ಪಂಚಾಮೃತಂ ದೇವಿ ಗೃಹಾಣ ಸುರಪೂಜಿತೇ ॥
ತುಲಸ್ಯೈ ನಮಃ । ಪಂಚಾಮೃತಸ್ನಾನಂ ಸಮರ್ಪಯಾಮಿ ।
(ಪಂಚಾಮೃತವನ್ನು ಪ್ರೋಕ್ಷಿಸಿರಿ)

**ಶುದ್ಧೋದಕಸ್ನಾನಮ್ ।**

ಗಂಗಾದಿಸರ್ವತೀರ್ಥೇಭ್ಯಃ ಸಮಾನೀತಮಿದಂ ಜಲಮ್ ।
ಸ್ನಾನಾರ್ಥಂ ತುಲಸೀ ಸ್ವಚ್ಛಂ ಪ್ರೀತ್ಯಾ ತತ್ಪ್ರತಿಗೃಹ್ಯತಾಮ್ ॥
ತುಲಸ್ಯೈ ನಮಃ । ಶುದ್ಧೋದಕ ಸ್ನಾನಂ ಸಮರ್ಪಯಾಮಿ । (ಹೂವಿನಿಂದ ನೀರನ್ನು ಪ್ರೋಕ್ಷಿಸಿ) ಸ್ನಾನಾನಂತರಂ ಆಚಮನೀಯಂ ಸಮರ್ಪಯಾಮಿ । (ನೀರನ್ನು ತೋರಿಸಿ ಪಾತ್ರೆಗೆ ಬಿಡಬೇಕು)

**ವಸ್ತ್ರಮ್ ।**

ಸುರಾರ್ಚಿತಾಂಘ್ರಿಯುಗಲೇ ದುಕೂಲವಸನಪ್ರಿಯೇ ।
ವಸ್ತ್ರಯುಗ್ಮಂ ಪ್ರದಾಸ್ಯಾಮಿ ಗೃಹಾಣ ದುರಿತಾಪಹೇ ॥
ತುಲಸ್ಯೈ ನಮಃ । ವಸ್ತ್ರಯುಗ್ಮಂ ಸಮರ್ಪಯಾಮಿ ।
(ಗೆಜ್ಜೆವಸ್ತ್ರ ಸಮರ್ಪಿಸಬೇಕು)

**ಕಂಚುಕಮ್ ।**

ನವರತ್ನಾದಿಭಿರ್ಬದ್ಧಾಂ ಸೌವರ್ಣೈಶ್ಚೈವ ತಂತುಭಿಃ ।
ನಿರ್ಮಿತಾಂ ಕಂಚುಕೀಂ ಭಕ್ತ್ಯಾ ಗೃಹಾಣ ತ್ವಂ ಸುರೇಶ್ವರಿ ॥
ತುಲಸ್ಯೈ ನಮಃ । ಕಂಚುಕಂ ಸಮರ್ಪಯಾಮಿ ।
(ರವಿಕೆಯನ್ನು ಸಮರ್ಪಿಸಬೇಕು)

**ಆಭರಣಮ್ ।**

ಸುವರ್ಣನಿರ್ಮಿತಂ ದಿವ್ಯಂ ನಾನಾರತ್ನಸುಶೋಭಿತಮ್ ।
ತ್ರೈಲೋಕ್ಯಪೂಜಿತೇ ದೇವಿ ಗೃಹಾಣಾಭರಣಂ ಶುಭಮ್ ॥
ತುಲಸ್ಯೈ ನಮಃ । ಆಭರಣಾನಿ ಸಮರ್ಪಯಾಮಿ ।
(ಮಂತ್ರಾಕ್ಷತೆಯನ್ನು ಸಮರ್ಪಿಸಬೇಕು)

**ಗಂಧಃ ।**

ಕರ್ಪೂರಾಗರುಕಸ್ತೂರೀ ರೋಚನಾದಿಭಿರನ್ವಿತಮ್ ।
ಗಂಧಂ ದದಾಮ್ಯಹಂ ದೇವಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥
ತುಲಸ್ಯೈ ನಮಃ । ಗಂಧಂ ಸಮರ್ಪಯಾಮಿ ।
(ಶ್ರೀಹರಿಗೆ ಅರ್ಪಿತವಾದ ಗಂಧವನ್ನು ಸಮರ್ಪಿಸಬೇಕು)

**ಅಕ್ಷತಾಃ ।**

ಶ್ವೇತಾಂಶ್ಚ ಚಂದ್ರಾವರ್ಣಾಭಾನ್ ಹರಿದ್ರಾರಾಗರಂಜಿತಾನ್ ।
ಅಕ್ಷತಾನ್ ಸಂಗೃಹಾಣ ತ್ವಂ ತುಲಸ್ಯಘವಿನಾಶಿನೀ ॥
ತುಲಸ್ಯೈ ನಮಃ । ಅಕ್ಷತಾನ್ ಸಮರ್ಪಯಾಮಿ।
(ಮಂತ್ರಾಕ್ಷತೆಯನ್ನು ಸಮರ್ಪಿಸಬೇಕು)

**ಕಂಠಸೂತ್ರಮ್ ।**

ಸ್ವಚ್ಛಂ ನಿರ್ಮಲಮತ್ಯರ್ಥಂ ಸುವರ್ಣರಚಿತಂ ಶುಭಮ್ ।
ಕಂಠಸೂತ್ರಂ ಗೃಹಾಣ ತ್ವಂ ದಿವ್ಯಾನ್ಯಾಭರಣಾನಿ ಚ ॥
ತುಲಸ್ಯೈ ನಮಃ । ಮಂಗಲಸೂತ್ರಂ ಸಮರ್ಪಯಾಮಿ ।
(ಮಂಗಳಸೂತ್ರ ಸಮರ್ಪಿಸಿ, ಮೊದಲೇ ಹಾಕಿದ್ದರೆ ಮಂತ್ರಾಕ್ಷತೆ ಹಾಕಿ)

**ಸೌಭಾಗ್ಯದ್ರವ್ಯಾಣಿ ।**

ಕಂಠಸೂತ್ರಂ ತಾಲಪತ್ರಂ ಹರಿದ್ರಾಕುಂಕುಮಾಂಜನಮ್ ।
ಸಿಂಧೂರಾದಿ ಪ್ರದಾಸ್ಯಾಮಿ ಸೌಭಾಗ್ಯಂ ದೇಹಿ ಮೇಽವ್ಯಯೇ ॥
ತುಲಸ್ಯೈ ನಮಃ । ಸೌಭಾಗ್ಯದ್ರವ್ಯಾಣಿ ಸಮರ್ಪಯಾಮಿ ।
(ಮಂಗಳಸೂತ್ರ, ಅರಿಷಿಣ-ಕುಂಕುಮ-ತಾಡಪತ್ರೆ-ಕಾಡಿಗೆ-ಸಿಂಧೂರ ಮುಂತಾದ ಮಂಗಲದ್ರವ್ಯಗಳನ್ನು ಸಮರ್ಪಿಸಿ)

**ಪುಷ್ಪಾಣಿ ।**

ಕೇತಕೀ ಜಾತಿ ಪುನ್ನಾಗೈಶ್ಚಂಪಕೈರ್ಬಕುಲೈಶ್ಶುಭೈಃ ।
ಪೂಜಯಾಮಿ ಚ ದೇವೇಶಿ ವರದೇ ಭಕ್ತವತ್ಸಲೇ ॥
ತುಲಸ್ಯೈ ನಮಃ । ನಾನಾವಿಧಪುಷ್ಪಾಣಿ ಸಮರ್ಪಯಾಮಿ ।
(ಪುಷ್ಪಗಳನ್ನು ಸಮರ್ಪಿಸಬೇಕು)

**ಅಥ ಅಂಗಪೂಜಾ ।**

ಓಂ ತುಲಸ್ಯೈ ನಮಃ, ಪಾದೌ (ಕಾಲು) ಪೂಜಯಾಮಿ ।
ಓಂ ವಿಷ್ಣುಪತ್ನ್ಯೈ ನಮಃ, ಗುಲ್ಫೌ (ಹಿಮ್ಮಡಿ) ಪೂಜಯಾಮಿ ।
ಓಂ ಅಘಹಂತ್ರ್ಯೈ ನಮಃ, ಜಂಘೇ (ಮೊಣಕಾಲು) ಪೂಜಯಾಮಿ ।
ಓಂ ಲೋಕವಂದಿತಾಯೈ ನಮಃ, ಜಾನುನೀ (ನಡು) ಪೂಜಯಾಮಿ ।
ಓಂ ರಂಭೋರ್ವ್ಯೈ ನಮಃ, ಊರೂ (ತೊಡೆ) ಪೂಜಯಾಮಿ ।
ಓಂ ಪೀತಾಂಬರಧಾರಿಣ್ಯೈ ನಮಃ, ಕಟಿಂ (ಸೊಂಟ) ಪೂಜಯಾಮಿ ।
ಓಂ ಕ್ಷೀರಾಬ್ಧಿತನಯಾಯೈ ನಮಃ, ನಾಭಿಂ (ಹೊಕ್ಕಳು) ಪೂಜಯಾಮಿ ।
ಓಂ ದಾಮೋದರ ಪ್ರಿಯಾಯೈ ನಮಃ, ಉದರಂ (ಹೊಟ್ಟೆ) ಪೂಜಯಾಮಿ ।
ಓಂ ಕುಂಭಸ್ತನ್ಯೈ ನಮಃ, ಸ್ತನೌ (ಸ್ತನ) ಪೂಜಯಾಮಿ ।
ಓಂ ಲೋಕಜನನ್ಯೈ ನಮಃ, ಭುಜೌ (ಭುಜ) ಪೂಜಯಾಮಿ ।
ಓಂ ಸರ್ವಾಭರಣಭೂಷಿತಾಯೈ ನಮಃ, ಕಂಠಂ (ಕುತ್ತಿಗೆ) ಪೂಜಯಾಮಿ ।
ಓಂ ಸುಮುಖಾಯೈ ನಮಃ, ಮುಖಂ (ಮುಖ) ಪೂಜಯಾಮಿ ।
ಓಂ ಬಿಂಬೋಷ್ಠ್ಯೈ ನಮಃ, ಓಷ್ಠೌ (ತುಟಿಗಳು) ಪೂಜಯಾಮಿ ।
ಓಂ ಸುನಾಸಿಕಾಯೈ ನಮಃ, ನಾಸಿಕಾಂ (ಮೂಗು) ಪೂಜಯಾಮಿ ।
ಓಂ ಉತ್ಪಲಾಕ್ಷ್ಯೈ ನಮಃ, ನೇತ್ರೇ (ಕಣ್ಣುಗಳು) ಪೂಜಯಾಮಿ ।
ಓಂ ತಾಟಂಕಧಾರಿಣ್ಯೈ ನಮಃ, ಕರ್ಣೌ (ಕಿವಿಗಳು) ಪೂಜಯಾಮಿ ।
ಓಂ ರಮಾಯೈ ನಮಃ, ಲಲಾಟಂ (ಹಣೆ) ಪೂಜಯಾಮಿ ।
ಓಂ ಇಂದುಸೋದರ್ಯೈ ನಮಃ, ಶಿರಃ (ತಲೆ) ಪೂಜಯಾಮಿ ।
ಓಂ ತುಲಸ್ಯೈ ನಮಃ, ಸರ್ವಾಂಗಾನಿ (ಎಲ್ಲ ಅಂಗಗಳು) ಪೂಜಯಾಮಿ ।
(ಅಂಗಪೂಜೆಯನ್ನು ಮಂತ್ರಾಕ್ಷತೆ ಮತ್ತು ಹೂಗಳಿಂದ ಮಾಡಬೇಕು)

**ಧೂಪಃ ।**

ದಶಾಂಗಂ ಗುಗ್ಗುಲೋಪೇತಂ ಸುಗಂಧಂಚ ಮನೋಹರಮ್ ।
ಧೂಪಂ ದಾಸ್ಯಾಮಿ ತುಲಸಿ ಕೃಪಯಾ ತ್ವಂ ಗೃಹಾಣ ತಮ್ ॥
ತುಲಸ್ಯೈ ನಮಃ । ಧೂಪಮಾಘ್ರಾಪಯಾಮಿ ।
(ಕೆಂಡಕ್ಕೆ ಗಂಧದ ಪುಡಿ ಅಥವಾ ದಶಾಂಗದ ಪುಡಿ ಹಾಕಿ-ಧೂಪಾರತಿ ಮಾಡಬೇಕು)

**ದೀಪಮ್ ।**

ಘೃತಾಕ್ತವರ್ತಿಸಂಯುಕ್ತಮಂಧಕಾರವಿನಾಶಕಮ್ ।
ದೀಪಂ ದಾಸ್ಯಾಮಿ ತೇ ದೇವಿ ಗೃಹಾಣ ಮುದಿತಾ ಭವ ॥
ತುಲಸ್ಯೈ ನಮಃ । ದೀಪಂ ದರ್ಶಯಾಮಿ ।
(ಮೂರು ಮಂಗಳಾರತಿ ಬತ್ತಿಯಿಂದ ಏಕಾರತಿಯನ್ನು ಮಾಡಿ, ನಂತರ ಶಾಂತಗೊಳಿಸಬೇಕು)

**ನೈವೇದ್ಯಮ್ ।**

ನೈವೇದ್ಯಂ ಷಡ್ರಸೋಪೇತಂ ನಾನಾ ಲಡ್ಡುಕಮಿಶ್ರಿತಂ ।
ನಾನಾಭಕ್ಷ್ಯಫಲೋಪೇತಂ ಗೃಹಾಣಾಭೀಷ್ಟದಾಯಿನಿ ॥
ತುಲಸ್ಯೈ ನಮಃ । ನೈವೇದ್ಯಂ ಸಮರ್ಪಯಾಮಿ ।
(ಪರಮಾತ್ಮನಿಗೆ, ಲಕ್ಷ್ಮೀದೇವಿಗೆ ನೈವೇದ್ಯ ಮಾಡಿ ನಂತರ ತುಲಸಿಗೆ ನಿವೇದನ ಮಾಡಬೇಕು)

**ಪಾನೀಯಮ್ ।**

ಘನಸಾರಸುಗಂಧೇನ ಮಿಶ್ರಿತಂ ಪುಷ್ಪವಾಸಿತಮ್ ।
ಪಾನೀಯಂ ಗೃಹ್ಯತಾಂ ದೇವಿ ಶೀತಲಂ ಸುಮನೋಹರಮ್ ॥
ತುಲಸ್ಯೈ ನಮಃ । ಮಧ್ಯೇ ಮಧ್ಯೇ ಪಾನೀಯಂ ಸಮರ್ಪಯಾಮಿ । (ನೀರನ್ನು ನಿವೇದನ ಮಾಡಬೇಕು) ಹಸ್ತಪ್ರಕ್ಷಾಲನಂ ಸಮರ್ಪಯಾಮಿ । ಮುಖಪ್ರಕ್ಷಾಲನಂ ಸಮರ್ಪಯಾಮಿ । ಗಂಡೂಷಂ ಸಮರ್ಪಯಾಮಿ । ಆಚಮನಂ ಸಮರ್ಪಯಾಮಿ । ಕರೋದ್ವರ್ತನಂ ಸಮರ್ಪಯಾಮಿ । (ಇವುಗಳನ್ನು ಹೇಳುತ್ತಾ ಕಲಶದ ನೀರನ್ನು ಪ್ರತ್ಯೇಕವಾಗಿ ಅರ್ಘ್ಯಪಾತ್ರೆಗೆ ಬಿಡಬೇಕು)

**ಫಲನಿವೇದನಮ್ ।**

ಬೀಜಪೂರಾಮ್ರಪನಸಖರ್ಜೂರೀಕದಲೀಫಲಮ್ ।
ನಾರಿಕೇಲಫಲಂ ದಿವ್ಯಂ ಗೃಹಾಣ ಸುರಪೂಜಿತೇ ॥
ತುಲಸ್ಯೈ ನಮಃ । ನಾನಾವಿಧಫಲಾನಿ ಸಮರ್ಪಯಾಮಿ ।
(ನಾನಾ ವಿಧ ಹಣ್ಣುಗಳ ನಿವೇದನ ಮಾಡಬೇಕು)

**ತಾಂಬೂಲಮ್ ।**

ಪೂಗೀಫಲಸಮಾಯುಕ್ತಂ ನಾಗವಲ್ಲೀದಲೈರ್ಯುತಮ್ ।
ಕರ್ಪೂರಚೂರ್ಣಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಮ್ ॥
ತುಲಸ್ಯೈ ನಮಃ । ತಾಂಬೂಲಂ ಸಮರ್ಪಯಾಮಿ ।
(ಎಲೆ-ಅಡಿಕೆ ನಿವೇದನ ಮಾಡಬೇಕು)

**ದಕ್ಷಿಣಾ ।**

ಸುವರ್ಣಂ ಸರ್ವಧಾತೂನಾಂ ಶ್ರೇಷ್ಠಂ ದೇವಿ ಚ ತತ್ಸದಾ ।
ಭಕ್ತ್ಯಾ ದದಾಮಿ ವರದೇ ಸ್ವರ್ಣವೃದ್ಧಿಂ ಚ ದೇಹಿ ಮೇ ॥
ತುಲಸ್ಯೈ ನಮಃ ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ।
(ದಕ್ಷಿಣೆಯನ್ನು ತಾಂಬೂಲದೊಂದಿಗೆ ಇಡಬೇಕು)

**ಮಂಗಲನೀರಾಜನಮ್ ।**

ನೀರಾಜನಂ ಸುಮಾಂಗಲ್ಯಂ ಕರ್ಪೂರೇಣ ಸಮನ್ವಿತಮ್ ।
ವಹ್ನಿಚಂದ್ರಾರ್ಕಸದೃಶಂ ಗೃಹಾಣ ದುರಿತಾಪಹೇ ॥

ಓಂ ॥ ಶ್ರಿಯೇ ಜಾತಃ ಶ್ರಿಯಃ ಆನಿರಿಯಾಯ
ಶ್ರಿಯಂ ವಯೋ ಜರಿತೃಭ್ಯೋ ದಧಾತಿ ।
ಶ್ರಿಯಂ ವಸಾನಾ ಅಮೃತತ್ವಮಾಯನ್
ಭವಂತಿ ಸತ್ಯಾ ಸಮಿಥಾ ಮಿತದ್ರೌ ॥
ಶ್ರಿಯ ಏವೈನಂ ತಚ್ಛ್ರಿಯಮಾ ದಧಾತಿ
ಸಂತತಮೃಚಾ ವಷಟ್ ಕೃತ್ಯಮ್ ।
ಸಂತತ್ಯೈ ಸಂಧೀಯತೇ
ಪ್ರಜಯಾ ಪಶುಭಿಃ ಯ ಏವಂ ವೇದ ॥
ಮಹಾನೀರಾಜನಂ ಸಮರ್ಪಯಾಮಿ ।
(5 ಬತ್ತಿಯ ಮಂಗಳಾರತಿ ಮಾಡಿ)

**ಮಂತ್ರಪುಷ್ಪಾಂಜಲಿಃ ।**

ನಮಸ್ತೇ ಸರ್ವಲೋಕಾನಾಂ ಜನನ್ಯೈ ಪುಣ್ಯಮೂರ್ತಯೇ ।
ನಮಸ್ತೇ ದೇವಿ ಕಲ್ಯಾಣಿ ನಮಸ್ತೇ ಮುನಿಪೂಜಿತೇ ॥
ತುಲಸ್ಯೈ ನಮಃ । ಮಂತ್ರಪುಷ್ಪಾಂಜಲಿಂ ಸಮರ್ಪಯಾಮಿ ।
(ಕೈಯಲ್ಲಿ ಮಂತ್ರಾಕ್ಷತೆ-ಹೂಗಳನ್ನು ಹಿಡಿದುಕೊಂಡು ಮಂತ್ರ ಹೇಳಿ ತುಲಸಿಗೆ ಸಮರ್ಪಿಸಿ)

**ರಾಜೋಪಚಾರಪೂಜಾ ।**

ತುಲಸ್ಯೈ ನಮಃ । ಛತ್ರಚಾಮರವ್ಯಜನದರ್ಪಣನೃತ್ತಗೀತವಾದ್ಯಾಂದೋಲಿಕಾದಿ ಸಮಸ್ತರಾಜೋಪಚಾರಾನ್ ಸಮರ್ಪಯಾಮಿ ।
(ಮಂತ್ರಾಕ್ಷತೆ-ಹೂಗಳನ್ನು ಸಮರ್ಪಿಸಿ)

**ಪ್ರದಕ್ಷಿಣಾ ।**

ಪುಷ್ಕರಾದ್ಯಾನಿ ತೀರ್ಥಾನಿ ಗಂಗಾದ್ಯಾ ಸರಿತಸ್ತಥಾ ।
ವಾಸುದೇವಾದಯೋ ದೇವಾ ವಸಂತಿ ತುಲಸೀವನೇ ॥

ತುಲಸೀ ಕಾನನಂ ಯತ್ರ ಯತ್ರ ಪದ್ಮವನಾನಿ ಚ ।
ವಸಂತಿ ವೈಷ್ಣವಾಃ ಯತ್ರ ತತ್ರ ಸನ್ನಿಹಿತೋ ಹರಿಃ ॥

ದೇವ್ಯೈ ವಿಘ್ನವಿನಾಶಿನ್ಯೈ ಪ್ರದಕ್ಷಿಣಕೃತಾಂ ನೃಣಾಮ್ ।
ಪ್ರದಕ್ಷಿಣಂ ಕರೋಮ್ಯದ್ಯ ವಾಂಛಿತಾರ್ಥ ಪ್ರದಾಭವ ॥
ತುಲಸ್ಯೈ ನಮಃ । ಪ್ರದಕ್ಷಿಣಾನಿ ಸಮರ್ಪಯಾಮಿ ॥
(ಪ್ರದಕ್ಷಿಣೆ ಮಾಡಬೇಕು)

**ನಮಸ್ಕಾರಃ ।**

ನಮಃ ತುಲಸಿ ಕಲ್ಯಾಣಿ ನಮೋ ವಿಷ್ಣುಪ್ರಿಯೇ ಶುಭೇ ।
ನಮೋ ಮೋಕ್ಷಪ್ರದೇ ದೇವಿ ನಮಃ ಸಂಪ್ರತ್ಪ್ರದಾಯಿಕೇ ॥

ಯನ್ಮೂಲೇ ಸರ್ವತೀರ್ಥಾನಿ ಯನ್ಮಧ್ಯೇ ಸರ್ವದೇವತಾಃ ।
ಯದಗ್ರೇ ಸರ್ವವೇದಾಶ್ಚ ತುಲಸಿ ತ್ವಾಂ ನಮಾಮ್ಯಹಮ್ ॥
ತುಲಸ್ಯೈ ನಮಃ । ನಮಸ್ಕಾರಾನ್ ಸಮರ್ಪಯಾಮಿ ।
(ನಮಸ್ಕಾರಗಳನ್ನು ಮಾಡಬೇಕು)

**ಪ್ರಾರ್ಥನಾ ।**

ಮನಃ ಪ್ರಸಾದಜನನೀ ಸುಖಸೌಭಾಗ್ಯವರ್ಧಿನೀ ।
ಆಧಿಂ ವ್ಯಾಧಿಂ ಚ ಹರ ಮೇ ತುಲಸಿ ತ್ವಾಂ ನಮಾಮ್ಯಹಮ್ ॥

ಶ್ರಿಯಂ ದೇಹಿ ಯಶೋ ದೇಹಿ ಕೀರ್ತಿಮಾಯುಸ್ತಥಾ ಸುಖಮ್ ।
ಬಲಂ ಪುಷ್ಟಿಂ ತಥಾ ಧರ್ಮಂ ತುಲಸಿ ತ್ವಂ ಪ್ರಯಚ್ಛ ಮೇ ॥
ತುಲಸ್ಯೈ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥
(ಪ್ರಾರ್ಥಿಸಬೇಕು)

## ॥ ಅಥ ಪ್ರಬೋಧೋತ್ಸವಃ ॥

**ತತ್ರ ಮಂತ್ರಾಃ ।**

ಇದಂ ವಿಷ್ಣುರ್ವಿಚಕ್ರಮೇ ತ್ರೇಧಾ ನಿದಧೇ ಪದಮ್ ।
ಸಮೂಳ್ಹಮಸ್ಯ ಪಾಂಸುರೇ ॥

ಬ್ರಹ್ಮೇಂದ್ರ ರುದ್ರಾಗ್ನಿ ಕುಬೇರ ಸೂರ್ಯ ಸೋಮಾದಿಭಿರ್ವಂದಿತ ವಂದನೀಯ ।
ಬುಧ್ಯಸ್ವ ದೇವೇಶ ಜಗನ್ನಿವಾಸ ಮಂತ್ರಪ್ರಭಾವೇಣ ಸುಖೇನ ದೇವ ॥

ಇಯಂ ತು ದ್ವಾದಶೀದೇವ ಪ್ರಬೋಧಾರ್ಥಂ ವಿನಿರ್ಮಿತಾ ।
ತ್ವಯ್ಯೈವ ಸರ್ವಲೋಕಾನಾಂ ಹಿತಾರ್ಥಂ ಶೇಷಶಾಯಿನಾ ॥

ಉತ್ತಿಷ್ಠೋತ್ತಿಷ್ಠ ಗೋವಿಂದ ತ್ಯಜ ನಿದ್ರಾಂ ಜಗತ್ಪತೇ ।
ತ್ವಯಿ ಸುಪ್ತೇ ಜಗತ್ಸುಪ್ತಂ ಉತ್ಥಿತೇ ಚೋತ್ಥಿತಂ ಭವೇತ್ ॥
(ಘಂಟೆ ಬಾರಿಸಿ ಕ್ಷೀರಸಮುದ್ರಶಾಯಿಯಾದ ಯೋಗನಿದ್ದೆಯಲ್ಲಿರುವ ಪರಮಾತ್ಮನನ್ನು ಮೇಲಿರುವ ಮಂತ್ರಗಳಿಂದ ಎಬ್ಬಿಸಿ ಪ್ರಾರ್ಥಿಸಬೇಕು)

ಚರಣಂ ಪವಿತ್ರಂ ವಿತ್ತಂ ಪುರಾಣಂ ಯೇನ ಪೂತಸ್ತರತಿ ದುಷ್ಕೃತಾನಿ ।
ತೇನ ಪವಿತ್ರೇಣ ಶುದ್ಧೇನ ಪೂತಾ ಅತಿಪಾಪ್ಮಾನಮರಾತಿಂ ತರೇಮ ॥
(ಶಂಖದಲ್ಲಿ ಹಾಲನ್ನು ಹಾಕಿಕೊಂಡು, ಘಂಟೆ ಬಾರಿಸುತ್ತಾ ದಾಮೋದರರೂಪಿ ಭಗವಂತನು ವಿವಾಹ ಮಂಟಪಕ್ಕೆ ಆಗಮಿಸುವ ಸಲುವಾಗಿ ಅಭಿಷೇಕ ಮಾಡಬೇಕು. ಅನಂತರ ಮಂತ್ರಾಕ್ಷತೆ ಹೂ-ತುಳಸಿಯನ್ನು ಸಮರ್ಪಿಸಬೇಕು)

ಗತಾ ಮೇಘಾ ವಿಯಚ್ಚೈವ ನಿರ್ಮಲಂ ನಿರ್ಮಲಾದಿಶಃ ।
ಶಾರದಾನಿ ಚ ಪುಷ್ಪಾಣಿ ಗೃಹಾಣ ಮಮ ಕೇಶವ ॥
ಶ್ರೀರಾಧಾದಾಮೋದರಾಯ ನಮಃ । ಪುಷ್ಪಾಕ್ಷತಾನ್ ಸಮರ್ಪಯಾಮಿ ॥
(ದೇವರ ಪಾದಪದ್ಮಗಳಿಗೆ ಪುಷ್ಪಗಳನ್ನರ್ಪಿಸಬೇಕು)

## ॥ ಅಥ ತುಲಸೀವಿವಾಹಃ ॥

ಆಚಮ್ಯ ಪ್ರಾಣಾನಾಯಮ್ಯ, ಸಂಕಲ್ಪ್ಯ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತ ಕಾರ್ತೀಕ ಶ್ರೀರಾಧಾದಾಮೋದರಾಭಿನ್ನ ಶ್ರೀಲಕ್ಷ್ಮೀನಾರಾಯಣ ಪ್ರೇರಣಯಾ-ಪ್ರೀತ್ಯರ್ಥಂ ಶ್ರೀಲಕ್ಷ್ಮೀನಾರಾಯಣಸ್ಯ ತುಲಸ್ಯಾ ಸಹ ವಿವಾಹಂ ಕರಿಷ್ಯೇ ॥ (ಮಂತ್ರಾಕ್ಷತೆ ನೀರು ಬಿಡಿ)

(ತುಲಸಿಗೆ ಅಭಿಮುಖನಾಗಿ ದಾಮೋದರನನ್ನು (ಕೃಷ್ಣನ ಪ್ರತಿಮೆಯನ್ನಿಟ್ಟು) ಕೂಡಿಸಿ, ಮಧ್ಯದಲ್ಲಿ ದೇವರ ವಸ್ತ್ರವನ್ನು ಅಂತಃಪಟವಾಗಿ ಹಿಡಿದು ಎಲ್ಲರೂ ಕೈಯಲ್ಲಿ ಮಂತ್ರಾಕ್ಷತೆ ಮತ್ತು ಭತ್ತದ ಹರಳುಗಳನ್ನು ಹಿಡಿದುಕೊಂಡು, ವೇದಜ್ಞರು ಸೂರ್ಯಸೂಕ್ತ ಮತ್ತು ಮಂಗಲಾಷ್ಟಕಗಳನ್ನು ಪಠಿಸಿ, ಅಂತಃಪಟವನ್ನು ಉತ್ತರದಿಕ್ಕಿಗೆ ಸರಿಸಿ ತುಲಸೀ-ದಾಮೋದರರಿಗೆ ಎಲ್ಲರೂ ಅಕ್ಷತೆಯನ್ನು ಸಮರ್ಪಿಸುವುದು)

**ಸೂರ್ಯಸೂಕ್ತಮ್ ।**

ಓಂ ॥ ಸತ್ಯೇನೋತ್ತಭಿತಾಭೂಮಿಃ ಸೂರ್ಯೇಣೋತ್ತಭಿತಾ ದ್ಯೌಃ ।
ಋತೇನಾದಿತ್ಯಾಸ್ತಿಷ್ಠಂತಿ ದಿವಿ ಸೋಮೋ ಅಧಿಶ್ರಿತಃ ॥

**ಮಂಗಲಾಷ್ಟಕಮ್ ।**

ಲಕ್ಷ್ಮೀರ್ಯಸ್ಯ ಪರಿಗ್ರಹಃ ಕಮಲಭೂಃ ಸೂನುರ್ಗರುತ್ಮಾನ್ರಥಃ
ಪೌತ್ರಶ್ಚಂದ್ರವಿಭೂಷಣಸ್ಸುರಗುರುಃ ಶೇಷಶ್ಚ ಶಯ್ಯಾಪುನಃ ।
ಬ್ರಹ್ಮಾಂಡಂ ವರಮಂದಿರಂ ಸುರಗಣಾಃ ಯಸ್ಯ ಪ್ರಭೋಃ ಸೇವಕಾಃ
ಸತ್ರೈಲೋಕ್ಯಕುಟುಂಬಪಾಲನಪರಃ ಕುರ್ಯಾದ್ಧರಿರ್ಮಂಗಲಮ್ ॥

(ಸಮಯಾವಕಾಶವಿದ್ದರೆ ಸಂಪೂರ್ಣ ಮಂಗಲಾಷ್ಟಕವನ್ನು ಪಠಿಸಬೇಕು)

**ಶ್ರೀವಿಷ್ಣವೇ ತುಲಸೀದಾನಮ್ ।**

(ಅನಂತರ ಈ ಶ್ಲೋಕದಿಂದ ತುಲಸೀದೇವಿಯನ್ನು ದಾಮೋದರನಿಗೆ ಒಪ್ಪಿಸಬೇಕು)

ದೇವೀಂ ಕನಕಸಂಪನ್ನಾಂ ಕನಕಾಭರಣೈರ್ಯುತಾಮ್ ।
ದಾಸ್ಯಾಮಿ ವಿಷ್ಣವೇ ತುಭ್ಯಂ ಬ್ರಹ್ಮಲೋಕಜಿಗೀಷಯಾ ॥

ಮಯಾ ಸಂವರ್ಧಿತಾಂ ಯಥಾಶಕ್ತ್ಯಾಲಂಕೃತಾಂ ಇಮಾಂ ತುಲಸೀಂ ದಾಮೋದರಾಯ ಶ್ರೀಧರರೂಪಿಣೇ ವರಾಯ ತುಭ್ಯಮಹಂ ಸಂಪ್ರದದೇ ।

(ಈ ಮಂತ್ರ ಹೇಳಿ ದೇವರ ಮುಂದೆ ಮಂತ್ರಾಕ್ಷತೆ-ನೀರನ್ನು ಬಿಡಬೇಕು. ಸಾಲಂಕೃತಳಾದ ತುಳಸಿಯನ್ನು ಶ್ರೀದಾಮೋದರನು ಸ್ವೀಕರಿಸಲಿ ಎಂದು ಅಕ್ಷತೆಯೊಂದಿಗೆ ನೀರನ್ನು ಬಿಟ್ಟು ಪ್ರಾರ್ಥಿಸಬೇಕು)

ಇಮಾಂ ದೇವೀಂ ಪ್ರತಿಗೃಹ್ಣಾತು ಭವಾನ್ ॥

(ಎಂದು ದೇವರಲ್ಲಿ ಪ್ರಾರ್ಥಿಸಿ, ಭಗವಂತನ ಹಸ್ತವನ್ನು ತುಳಸಿಗೆ ಮುಟ್ಟಿಸಿ ಮುಂದಿನ ಮಂತ್ರ ಹೇಳಬೇಕು)

ಕ ಇದಂ ಕಸ್ಮಾ ಅದಾತ್ । ಕಾಮಃ ಕಾಮಾಯ । ಕಾಮೋ ದಾತಾ । ಕಾಮಃ ಪ್ರತಿಗೃಹೀತಾ । ಕಾಮಂ ಸಮುದ್ರಮಾವಿಶ । ಕಾಮೇನ ತ್ವಾ ಪ್ರತಿಗೃಹ್ಣಾಮಿ । ಕಾಮೈತತ್ತೇ । ವೃಷ್ಟಿರಸಿ ದ್ಯೌಸ್ತ್ವಾ ದದಾತು । ಪೃಥಿವೀ ಪ್ರತಿಗೃಹ್ಣಾತು । ಇತಿ ಮಂತ್ರಂ ಅನ್ಯೇನ ವಾಚಯೇತ್ । (ಆಚಾರ್ಯಃ)

ತ್ವಂ ದೇವಿ ಮೇಽಗ್ರತೋ ಭೂಯಾಃ ತುಲಸೀದೇವಿ ಪಾರ್ಶ್ವತಃ ।
ತ್ವಂ ದೇವಿ ಪೃಷ್ಠತೋ ಭೂಯಾಸ್ತ್ವದ್ದಾನಾನ್ಮೋಕ್ಷಮಾಪ್ನುಯಾಮ್ ॥

ಅಸ್ಯ ದಾನಸ್ಯ ಪ್ರತಿಷ್ಠಾಸಿದ್ಧ್ಯರ್ಥಂ ಇಮಾಂ ಸೌವರ್ಣೀಂ ದಕ್ಷಿಣಾಂ ಸಂಪ್ರದದೇ ।

(ಮೇಲಿನ ಶ್ಲೋಕಗಳಿಂದ ತುಳಸಿಯನ್ನು ಶ್ರೀದಾಮೋದರರಿಗೆ ಸಮರ್ಪಣ ಮಾಡಿ ಪುಣ್ಯ ಪಡೆಯುವ ಸಲುವಾಗಿ ತಾಂಬೂಲ ದಕ್ಷಿಣೆಗಳನ್ನು ದೇವರಿಗೆ ಸಮರ್ಪಿಸಬೇಕು)

ಪ್ರಸೀದ ತುಲಸೀದೇವಿ ಪ್ರಸೀದ ಹರಿವಲ್ಲಭೇ ।
ಕ್ಷೀರೋದಮಥನೋದ್ಭೂತೇ ತುಲಸಿ ತ್ವಾಂ ನಮಾಮ್ಯಹಮ್ ॥

**ಮಾಂಗಲ್ಯಬಂಧನಮ್ ।**

ಮಾಂಗಲ್ಯಂ ತಂತುನಾನೇನ ಜಗಜ್ಜೀವನ ಹೇತುನಾ ।
ಕಂಠೇ ಬಧ್ನಾತಿ ಸುಭಗೇ ಸಾಜೀವ ಶರದಃ ಶತಮ್ ॥

ಧ್ರುವಾದ್ಯೌಃ ಧ್ರುವಾ ಪೃಥಿವೀ ಧ್ರುವಾ ಸಃ ಪರ್ವತಾ ಇಮೇ ।
ಧ್ರುವಂ ವಿಶ್ವಮಿದಂ ಜಗದ್ಧ್ರುವೋ ರಾಜಾವಿಶಾಮಯಮ್ ॥

ತದಸ್ತು ಮಿತ್ರಾವರುಣಾ ತದಗ್ನೇ ಶಂಯೋರಸ್ಮಭ್ಯಮಿದಮಸ್ತು ಶಸ್ತಮ್ ।
ಅಶೀಮಹಿ ಗಾಧಮುತ ಪ್ರತಿಷ್ಠಾಂ ನಮೋ ದಿವೇ ಬೃಹತೇ ಸಾದನಾಯ ॥
(ಈ ಮಂತ್ರದಿಂದ ಪರಮಾತ್ಮನ ಕೈ ಮುಟ್ಟಿಸಿದ ಮಾಂಗಲ್ಯವನ್ನು ತುಳಸಿಗೆ ಕಟ್ಟಬೇಕು, ಅಕ್ಷತೆ ಹಾಕಬೇಕು)
ನಂತರ, ಬ್ರಾಹ್ಮಣರು ಮುಂದಿನ ವೇದಮಂತ್ರಗಳನ್ನು ಪಠಿಸಬೇಕು.

ಓಂ ॥ ಸ್ವಸ್ತಿನೋ ಮಿಮೀತಾಮಶ್ವಿನಾಭಗಃ ಸ್ವಸ್ತಿ ದೇವ್ಯದಿತಿರನರ್ವಣಃ ।
ಸ್ವಸ್ತಿಪೂಷಾ ಅಸುರೋ ದಧಾತು ನಃ ಸ್ವಸ್ತಿ ದ್ಯಾವಾಪೃಥಿವೀ ಸುಚೇತನಾ ॥

ಓಂ ॥ ಶಂ ನ ಇಂದ್ರಾಗ್ನೀ ಭವತಾಮವೋಭಿಃ ಶಂ ನ ಇಂದ್ರಾವರುಣಾರಾತಹವ್ಯಾ ।
ಶಮಿಂದ್ರಾಸೋಮಾಸುವಿತಾಯ ಶಂಯೋಃ ಶಂ ನ ಇಂದ್ರಾಪೂಷಣಾವಾಜಸಾತೌ ॥

ಓಂ ॥ ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ ।
ಯೋ ಅಸ್ಕಭಾಯದುತ್ತರಂ ಸಧಸ್ಥಂ ವಿಚಕ್ರಮಾಣಸ್ತ್ರೇಧೋರುಗಾಯಃ ॥

ಓಂ ॥ ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಂ ।
ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆವಹ ॥

ಓಂ ॥ ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಂ ॥
(ತುಳಸಿಯಿಂದೊಡಗೂಡಿದ ಶ್ರೀದಾಮೋದರನಿಗೆ ಮಹಾಮಂಗಳಾರತಿ ಮಾಡಬೇಕು)

**ಮಂಗಲನೀರಾಜನಮ್ ।**

ಶ್ರಿಯೇ ಜಾತಃ ಶ್ರಿಯ ಆನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದಧಾತಿ ।
ಶ್ರಿಯಂ ವಸಾನಾ ಅಮೃತತ್ವಮಾಯನ್ ಭವಂತಿ ಸತ್ಯಾ ಸಮಿಥಾಮಿತದ್ರೌ ।

ಶ್ರಿಯ ಏವೈನಂ ತಚ್ಛ್ರಿಯಮಾದಧಾತಿ
ಸಂತತಮೃಚಾ ವಷಟ್ಕೃತ್ಯಂ ಸಂತತ್ಯೈ ಸಂಧೀಯತೇ ।
ಪ್ರಜಯಾ ಪಶುಭಿಃ ಯ ಏವಂ ವೇದ ॥
(ಮಂಗಳಾರತಿ ಮಾಡಿ, ಮಂತ್ರಪುಷ್ಪಾರ್ಚನೆಯನ್ನು ಮಾಡಬೇಕು)

**ಪ್ರದಕ್ಷಿಣಾ ।**

ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿ ತಾನಿ ಪ್ರಣಶ್ಯಂತಿ ಪ್ರದಕ್ಷಿಣಪದೇ ಪದೇ ॥

ಶ್ರೀತುಲಸ್ಯಂತರ್ಗತ ಕಾರ್ತೀಕರಾಧಾದಾಮೋದರಾಯ ನಮಃ । ಪ್ರದಕ್ಷಿಣಾಃ ಸಮರ್ಪಯಾಮಿ । (ಪ್ರದಕ್ಷಿಣೆ ಹಾಕಿರಿ)

**ನಮಸ್ಕಾರಃ ।**

ನಮಸ್ತೇ ಸರ್ವಲೋಕೇಶ ನಮಸ್ತೇ ಲೋಕವಂದಿತ ।
ನಮಸ್ತೇಽಸ್ತು ಸದಾ ದೇವ ತ್ರಾಹಿ ಮಾಂ ದುಃಖಸಾಗರಾತ್ ॥
ಶ್ರೀತುಲಸ್ಯಂತರ್ಗತ ಕಾರ್ತೀಕರಾಧಾದಾಮೋದರಾಯ ನಮಃ । ನಮಸ್ಕಾರಾನ್ ಸಮರ್ಪಯಾಮಿ । (ನಮಸ್ಕಾರ ಮಾಡಿ)

**ಪ್ರಾರ್ಥನಾ ।**

ಇದಂ ವ್ರತಂ ಮಯಾ ದೇವ ತವ ಪ್ರೀತ್ಯೈ ಕೃತಂ ಪ್ರಭೋ ।
ನ್ಯೂನಂ ಸಂಪೂರ್ಣತಾಂ ಯಾತು ತ್ವತ್ಪ್ರಸಾದಾದ್ರಮಾಪತೇ ॥
(ಈ ಶ್ಲೋಕದಿಂದ ಬೊಗಸೆ ತುಂಬಾ ಪುಷ್ಪವನ್ನರ್ಪಿಸಬೇಕು)

**ಸಮಾಪನಮ್ ।**

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ॥

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಪ್ರಬೋಧೋತ್ಸವಪೂಜನೇನ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಶ್ರೀದಾಮೋದರ-ತುಲಸೀವಿವಾಹಾಂಗ, ಶ್ರೀದಾಮೋದರ-ತುಲಸೀ ಷೋಡಶೋಪಚಾರ-ಪೂಜನೇನ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ-ಮುಖ್ಯಪ್ರಾಣಾಂತರ್ಗತ ತುಲಸೀಸಮೇತ ಕಾರ್ತೀಕ ಶ್ರೀರಾಧಾದಾಮೋದರಃ ಪ್ರೀಯತಾಂ ಸುಪ್ರೀತೋ ವರದೋ ಭವತು ಶ್ರೀಕೃಷ್ಣಾರ್ಪಣಮಸ್ತು ॥
(ಮೀಸಲು ನೀರು ಮತ್ತು ಮಂತ್ರಾಕ್ಷತೆಗಳನ್ನು ಕೈಗೆ ಹಾಕಿಕೊಂಡು ಅರ್ಘ್ಯಪಾತ್ರೆಗೆ ಬಿಡಬೇಕು)

(ತುಳಸೀ ವಿವಾಹ ಮುಗಿದ ನಂತರ ಬಂದಿರುವ ಬ್ರಾಹ್ಮಣರಿಗೆ ಫಲ-ತಾಂಬೂಲ, ದಕ್ಷಿಣೆಗಳನ್ನು ಕೊಡಬೇಕು)

ಇದಂ ವ್ರತಂ ಮಯಾ ದೇವ ತವ ಪ್ರೀತ್ಯೈ ಕೃತಂ ಪ್ರಭೋ ।
ನ್ಯೂನಂ ಸಂಪೂರ್ಣತಾಂ ಯಾತು ತ್ವತ್ಪ್ರಸಾದಾಜ್ಜನಾರ್ದನ ॥
(ದೇವರ ಮುಂದೆ ಚಾತುರ್ಮಾಸ್ಯ ವ್ರತವನ್ನು ಮಾಡಿರುವವರು ಮೇಲಿನ ಮಂತ್ರ ಹೇಳಿ ವ್ರತ ಸಮಾಪ್ತಿಗೊಳಿಸಬೇಕು)

॥ ಇತಿ ಪ್ರಬೋಧೋತ್ಸವಃ, ತುಲಸೀವಿವಾಹಃ, ತುಲಸೀಪೂಜಾಪದ್ಧತಿಶ್ಚ ಸಂಪೂರ್ಣಃ ॥

# ॥ ರಥಸಪ್ತಮೀ ॥

## (ಮಾಘಮಾಸ ಶುಕ್ಲಪಕ್ಷ ಸಪ್ತಮೀ)

ಸೂರ್ಯಗ್ರಹಣತುಲ್ಯಾ ತು ಶುಕ್ಲಾ ಮಾಘಸ್ಯ ಸಪ್ತಮೀ ।
ಅರುಣೋದಯವೇಲಾಯಾಂ ತಸ್ಯಾಂ ಸ್ನಾನಂ ಮಹಾಫಲಮ್ ॥
ಇತಿ ವಿಷ್ಣುಸ್ಮೃತಿಃ ॥

ಆಚಮ್ಯ, ಪ್ರಾಣಾನಾಯಮ್ಯ, ದೇಶಕಾಲೌ ಸಂಕೀರ್ತನಾಂತೇ ಸಪ್ತಾರ್ಕಪತ್ರಾಣಿ, ಸಪ್ತಬದರೀಪತ್ರಾಣಿ ವಾ ಶಿರಸಿ ನಿಧಾಯ ಸ್ನಾನಂ ಕಾರ್ಯಮ್ ।

(ಏಳು ಎಕ್ಕೆ ಎಲೆ ಅಥವಾ ಏಳು ಬೋರೆ ಎಲೆಗಳನ್ನು ತಲೆಯ ಮೇಲಿಟ್ಟುಕೊಂಡು ಸ್ನಾನ ಮಾಡುವಾಗ ಈ ಕೆಳಗಿನ ಮಂತ್ರಗಳನ್ನು ಪಠಿಸಬೇಕು)*

ಯದ್ಯಜ್ಜನ್ಮಕೃತಂ ಪಾಪಂ ಮಯಾ ಸಪ್ತಸು ಜನ್ಮಸು ।
ತನ್ಮೇ ರೋಗಂ ಚ ಶೋಕಂ ಚ ಮಾಕರೀ ಹಂತು ಸಪ್ತಮೀ ॥

ಸಪ್ತ ಸಪ್ತಪ್ರಿಯೇ ದೇವಿ ಸಪ್ತಲೋಕಸುಪೂಜಿತೇ ।
ಸಪ್ತಜನ್ಮಾರ್ಜಿತಂ ಪಾಪಂ ಹರ ಸಪ್ತಮಿ ಸತ್ತ್ವರಮ್ ॥

ನೌಮಿ ಸಪ್ತಮಿ ದೇವಿ ತ್ವಾಂ ಸಪ್ತಲೋಕೈಕಮಾತರಮ್ ।
ಸಪ್ತಾರ್ಕಪತ್ರಸ್ನಾನೇನ ಮಮ ಪಾಪಂ ವ್ಯಪೋಹತು ॥

ಏತಜ್ಜನ್ಮಕೃತಂ ಪಾಪಂ ಯಚ್ಚ ಜನ್ಮಾಂತರಾರ್ಜಿತಮ್ ।
ಮನೋವಾಕ್ಕಾಯಜಂ ಯಚ್ಚ ಜ್ಞಾತಾಜ್ಞಾತೇ ಚ ಯೇ ಪುನಃ ॥

ಇತಿ ಸಪ್ತವಿಧಂ ಪಾಪಂ ಸ್ನಾನಾನ್ಮೇ ಸಪ್ತಸಪ್ತಿಕೇ ।
ಸಪ್ತವ್ಯಾಧಿಸಮಾಯುಕ್ತಂ ಹರ ಮಾಕರಿ ಸಪ್ತಮಿ ॥

---

* ಪಾದಗಳ ಮೇಲೆ ಒಂದೊಂದು ಮಂಡಿಗಳ ಮೇಲೆ ಒಂದೊಂದು, ಭುಜಗಳ ಮೇಲೆ ಒಂದೊಂದು, ತಲೆಯ ಮೇಲೆ ಒಂದನ್ನು ಸ್ನಾನ ಮಾಡುವ ಪದ್ಧತಿ ಇದೆ.

**"ಆರೋಗ್ಯಂ ಭಾಸ್ಕರಾದಿಚ್ಛೇತ್"** ಎಂಬ ನುಡಿಗನುಸಾರ ಸೂರ್ಯನು ಆರೋಗ್ಯಪ್ರದ ದೇವತೆಯಾದ್ದರಿಂದ ಮತ್ತು ಜ್ಞಾನಿಗಳ ಮಾತಿನಂತೆ **"ಏಳು ಪ್ರಕಾರದ ಮಾಳಿಗೆ ಮನೆಯೊಳು ಗಾಳಿಯ ದೇವರ ದೇವ"**ನಾದ ಸೂರ್ಯಾಂತರ್ಗತ ನಾರಾಯಣನ ಸ್ಮರಣೆಯಿಂದ ಏಳು ಜನ್ಮದ ಪಾಪಗಳು ಉಪಶಮನ ಹೊಂದುತ್ತವೆ. ಈ ಕಾರಣದಿಂದ ಏಳು ಎಕ್ಕೆಎಲೆಗಳನ್ನಿಟ್ಟುಕೊಂಡು ಸ್ನಾನ ಮಾಡುವ ಪದ್ಧತಿ ರೂಢಿಗೆ ಬಂದಿದೆ.

ಏತನ್ಮಂತ್ರತ್ರಯಂ ಜಪ್ತ್ವಾ ಸ್ನಾತ್ವಾ ಪಾದೋದಕೇ ನರಃ ।
ಕೇಶವಾದಿತ್ಯಮಾಲೋಕ್ಯ ಕ್ಷಣಾನ್ನಿಷ್ಕಲ್ಮಷೋ ಭವೇತ್ ॥

(ಸ್ನಾನ ಮಾಡಿದ ನಂತರ ಸೂರ್ಯನಿಗೆ ಕೆಳಗಿನ ಮಂತ್ರದಿಂದ ಅರ್ಘ್ಯಪ್ರದಾನ ಮಾಡಬೇಕು)

**ಅರ್ಘ್ಯಪ್ರದಾನಮಂತ್ರಃ ।**

ಸಪ್ತ ಸಪ್ತಿವಹಪ್ರೀತ ಸಪ್ತಲೋಕಪ್ರದೀಪನ ।
ಸಪ್ತಮೀಸಹಿತೋ ದೇವ ಗೃಹಾಣಾರ್ಘ್ಯಂ ದಿವಾಕರ ॥

(ಈ ಶ್ಲೋಕದಿಂದ ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು ದೈನಂದಿನ ಪೂಜಾದಿ ಕೈಂಕರ್ಯವನ್ನು ಪ್ರಾರಂಭಿಸಬೇಕು)

॥ ಇತಿ ರಥಸಪ್ತಮೀ ಸಂಪೂರ್ಣಾ ॥

॥ ಶ್ರೀಕೃಷ್ಣಾರ್ಪಣಮಸ್ತು ॥



## ಧನುರ್ಮಾಸ

ಧನುರ್ಮಾಸದಲ್ಲಿ ದೇವರಿಗೆ ಹುಗ್ಗಿಯನ್ನು ನಿವೇದನ ಮಾಡುವುದರಿಂದ ಒಂದು ಸಾವಿರ ವರ್ಷಗಳ ಪೂಜಾಫಲವು ಒಂದೇ ದಿನದಲ್ಲಿ ಲಭಿಸುತ್ತದೆ. ಧನುರ್ಮಾಸದ ಆಚರಣೆಯಿಂದ ಶತ್ರುಜಯ, ದೀರ್ಘಾಯುಷ್ಯ, ಧನಸಂಪತ್ತಿ, ಶಾಸ್ತ್ರಜ್ಞಾನ ಮುಂತಾದವು ಲಭಿಸುತ್ತವೆ. ಯಾರು ದಾರಿದ್ರ್ಯಬುದ್ಧಿಯಿಂದ ಪರಮಾತ್ಮನಿಗೆ ಧನುರ್ಮಾಸದ ಪ್ರಾತಃಕಾಲದಲ್ಲಿ ಹುಗ್ಗಿಯನ್ನು ನಿವೇದಿಸುವುದಿಲ್ಲವೋ, ಅವರು ಏಳುಜನ್ಮಗಳಲ್ಲಿ ದಾರಿದ್ರ್ಯದಿಂದ ಪೀಡಿತರೂ, ಕ್ಷಯರೋಗಿಗಳೂ, ಮಂದಬುದ್ಧಿಯುಳ್ಳವರೂ ಆಗುವರು. ಸಾಧನದ್ವಾದಶೀ ಸಮಯದಲ್ಲಿ ಹೇಗೆ ಎಲ್ಲಾ ಕಾರ್ಯಗಳನ್ನು ಸಂಕುಚಿತಗೊಳಿಸಿ ಸಕಾಲದಲ್ಲಿ ದ್ವಾದಶೀ ವ್ರತವನ್ನು ಆಚರಿಸುತ್ತೇವೋ ಹಾಗೆ ಧನುರ್ಮಾಸದಲ್ಲಿಯೂ ಕೂಡ ಆಚರಿಸಬೇಕು. ಧನುರ್ಮಾಸದಲ್ಲಿ ಅರುಣೋದಯದ ಸಮಯದಲ್ಲಿ ದೇವರ ಪೂಜೆ ಮಾಡುವುದು ಉತ್ತಮ. ನಕ್ಷತ್ರಗಳು ಕಾಣೆಯಾದ ನಂತರ ಮಾಡುವ ಪೂಜೆಯು ಮಧ್ಯಮ. ಸೂರ್ಯೋದಯದ ನಂತರ ಮಾಡುವ ಪೂಜೆಯು ಅಧಮ. ಮಧ್ಯಾಹ್ನದಲ್ಲಿ ಮಾಡುವ ಪೂಜೆಯು ವ್ಯರ್ಥ ಎಂದು ಅಗ್ನಿಪುರಾಣದಿಂದ ತಿಳಿಯುತ್ತದೆ.



# ॥ ಭೀಷ್ಮಾಷ್ಟಮೀ ॥

## (ಮಾಘಮಾಸ ಶುಕ್ಲಪಕ್ಷ ಅಷ್ಟಮೀ)

ಬ್ರಹ್ಮಯಜ್ಞತರ್ಪಣಾನಂತರಂ ಭೀಷ್ಮತರ್ಪಣಂ ಕಾರ್ಯಮ್ ।

(ಬ್ರಹ್ಮಯಜ್ಞ ತರ್ಪಣವನ್ನು ಮಾಡಿದ ನಂತರ ಭೀಷ್ಮತರ್ಪಣ ಮಾಡಬೇಕು)

**ತತ್ರ ಮಂತ್ರಃ -**

ಭೀಷ್ಮಃ ಶಾಂತನವೋ ವೀರಃ ಸತ್ಯವಾದೀ ಜಿತೇಂದ್ರಿಯಃ ।
ಆಭಿರದ್ಭಿರವಾಪ್ನೋತು ಪುತ್ರಪೌತ್ರೋಚಿತಾಂ ಕ್ರಿಯಾಮ್ ॥
ಭೀಷ್ಮಾಯ ನಮಃ । ಭೀಷ್ಮಂ ತರ್ಪಯಾಮಿ ॥ 1 ॥

ವೈಯಾಘ್ರಪಾದಗೋತ್ರಾಯ ಸಾಂಕೃತಿಪ್ರವರಾಯ ಚ ।
ಅಪುತ್ರಾಯ ದದಾಮ್ಯೇತತ್ಸಲಿಲಂ ಭೀಷ್ಮವರ್ಮಣೇ ॥
ಭೀಷ್ಮಾಯ ನಮಃ । ಇದಮರ್ಘ್ಯಂ ಸಮರ್ಪಯಾಮಿ ॥ 2 ॥

ವಸೂನಾಮವತಾರಾಯ ಶಂತನೋರಾತ್ಮಜಾಯ ಚ ।
ಅರ್ಘ್ಯಂ ದದಾಮಿ ಭೀಷ್ಮಾಯ ಆಬಾಲಬ್ರಹ್ಮಚಾರಿಣೇ ॥
ಭೀಷ್ಮಾಯ ನಮಃ । ಇದಮರ್ಘ್ಯಂ ಸಮರ್ಪಯಾಮಿ ॥ 3 ॥

ಏತಚ್ಚ ಮಾಘಶುಕ್ಲಾಷ್ಟಮ್ಯಾಂ ಜೀವತ್ಪಿತೃಕೇಣಾಪಿ ಸವ್ಯೇನ ಕಾರ್ಯಮ್ । ಅತ್ರ ಪ್ರಮಾಣಮ್ । ಪಾದ್ಮೇ -

ಜೀವತ್ಪಿತಾಪಿ ಕುರ್ವೀತ ತರ್ಪಣಂ ಯಮಭೀಷ್ಮಯೋಃ ॥

(ಈ ಭೀಷ್ಮತರ್ಪಣವನ್ನು ಮಾಘ ಶುಕ್ಲ ಅಷ್ಟಮೀ ದಿನ ತಂದೆ ಇದ್ದವರೂ ಕೂಡ ಸವ್ಯದಿಂದ ಮಾಡಬೇಕು)

॥ ಇತಿ ಭೀಷ್ಮಾಷ್ಟಮೀ ॥

॥ ಶ್ರೀಕೃಷ್ಣಾರ್ಪಣಮಸ್ತು ॥



# ॥ ಶ್ರೀಸತ್ಯನಾರಾಯಣವ್ರತಮ್ ॥

**ಪೀಠಿಕೆ :**

ಶ್ರೀಸತ್ಯನಾರಾಯಣನ ವ್ರತವನ್ನು ಮಾಡತಕ್ಕವರು ಸಕಲ ಇಷ್ಟಾರ್ಥ ಸಿದ್ಧಿಗಾಗಿ ಈ ವ್ರತವನ್ನು ಮಾಡುವೆನೆಂದು ಸಂಕಲ್ಪಮಾಡಿ, ಮೊದಲು ಗಣಪತಿಪೂಜಾ, ಕಲಶಪೂಜಾ, ನವಗ್ರಹಪೂಜಾ ಮತ್ತು ಅಷ್ಟದಿಕ್ಪಾಲಕ ದೇವತಾಪೂಜೆಗಳನ್ನು ಮಾಡಿ, ನಂತರ ಬೊಗಸೆಯಲ್ಲಿ ಅಕ್ಷತೆ, ಹೂ, ತುಳಸಿಯನ್ನು ಹಿಡಿದುಕೊಂಡು **"ನಾರಾಯಣಂ ನಿಖಿಲಪೂರ್ಣಗುಣೈಕದೇಹಂ"** ಎಂಬ ಮುಂತಾದ ಧ್ಯಾನಶ್ಲೋಕಗಳಿಂದ ಧ್ಯಾನ, ಆವಾಹನ, ಆಸನ ಮಂತಾದ ಹದಿನಾರು ಉಪಚಾರಗಳಿಂದ ಶ್ರೀಸತ್ಯನಾರಾಯಣನನ್ನು ಪೂಜಿಸಬೇಕು.

ಈ ಸತ್ಯನಾರಾಯಣವ್ರತವನ್ನು ಹುಣ್ಣಿಮೆ ಅಮಾವಾಸ್ಯಾ ಅಷ್ಟಮೀ ದ್ವಾದಶೀ ತಿಥಿಗಳಲ್ಲಿಯೂ, ರವಿ, ಚಂದ್ರ, ಮಂಗಳವಾರಗಳಲ್ಲಿಯೂ, ವ್ಯತೀಪಾತ ಸಂಕ್ರಾಂತಿ, ಸೂರ್ಯ ಪರ್ವದಲ್ಲಿಯೂ, ಚಂದ್ರಾನುಕೂಲ್ಯದಲ್ಲಿಯೂ ಬ್ರಾಹ್ಮಣರು ಹೇಳಿದ ಮುಹೂರ್ತದಲ್ಲೂ ಶ್ರೀಸತ್ಯನಾರಾಯಣನ ವ್ರತವನ್ನು ಮಾಡಬೇಕು. ಆ ದಿನ ಪ್ರಾತಃಕಾಲದಲ್ಲಿ ಯಜಮಾನನು ಪತ್ನೀಸಮೇತನಾಗಿ ನದಿಯಲ್ಲಿ ಮಿಂದು, ಸ್ವಚ್ಛವಾದ, ತುಂಬಿದ ತಾಮ್ರದ ಕಲಶವನ್ನು ಮನೆಗೆ ತಂದು ಪೂಜಾಪೀಠದಲ್ಲಿಡಬೇಕು. ಆಮೇಲೆ ನಿತ್ಯಾಹ್ನಿಕವನ್ನು ಮಾಡಿ, ವ್ರತ ಮಾಡುವುದಕ್ಕೆಂದೇ ಸರ್ವ ಸಾಮಗ್ರಿಗಳನ್ನು ಕೂಡಿಸಿ, ಆಮೇಲೆ ಸಪತ್ನೀಕನಾಗಿ ಸುಗಂಧದ್ರವ್ಯ-ಗಳಿಂದ ಪೂಸಿ, ಬಿಸಿನೀರಿನಿಂದ ಸ್ನಾನ ಮಾಡಿ, ಪೀತಾಂಬರವನ್ನುಟ್ಟುಕೊಂಡು ಯೋಗ್ಯತಾನುಸಾರ-ವಾಗಿ ಎಲ್ಲ ಅಲಂಕಾರಗಳನ್ನೂ ಇಟ್ಟುಕೊಳ್ಳಬೇಕು. ಕುಂಕುಮ-ರಂಗವಲ್ಲ್ಯಾದಿಗಳಿಂದ ಅಲಂಕೃತವಾದ ಪೀಠದಲ್ಲಿ ಸಪತ್ನೀಕನಾಗಿ ಕುಳಿತುಕೊಂಡು ಆಚಮನ ಮಾಡಿ, ಪವಿತ್ರಪಾಣಿ-ಯಾಗಿ ಪ್ರಾಣಾಯಾಮವನ್ನು ಮಾಡಿ, ಕುಲದೇವತೆಯನ್ನೂ, ತಾಯಿ-ತಂದೆಗಳನ್ನೂ, ಬ್ರಾಹ್ಮಣರನ್ನೂ ನಮಿಸಿ, ಶ್ರೀಸತ್ಯನಾರಾಯಣನ ಪೂಜೆಯನ್ನು ಮಾಡಬೇಕು.

**ಪೂಜಾ ಸಾಹಿತ್ಯಗಳು** - ಅರಿಷಿಣ, ಕುಂಕುಮ, ರಂಗೋಲಿ, ಊದಿನಕಡ್ಡಿ, ಕರ್ಪೂರ, ವೀಳ್ಯದ ಎಲೆ, ಅಡಿಕೆಬೆಟ್ಟ, ತೆಂಗಿನಕಾಯಿ, ಉತ್ತತ್ತಿ, ಕೊಬ್ಬರಿಬಟ್ಟಲು, ಬೆಲ್ಲ ಅಥವಾ ಸಕ್ಕರೆ, ಗರಿಕೆ-ಪತ್ರೆ, ಹೂ, ತುಲಸಿ, ಮಾವಿನ ತಳಿರು, ಬಾಳೇಕಂಬ, ಪೂಜಾಮಂಟಪ, ತಾಮ್ರದ ತಂಬಿಗೆ, ಥಾಲಿ, ಉದ್ಧರಣೆ, ತಾಮ್ರದ ತಟ್ಟೆ, ಗಂಧ, ಅಕ್ಷತೆ, ಅಕ್ಕಿ, ಘಂಟೆ, ದೇವರ ಪ್ರತಿಮೆ, ವಸ್ತ್ರ, ಯಜ್ಞೋಪವೀತ.

**ಪಂಚಾಮೃತ ಸಾಮಾನುಗಳು** - ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಬಾಳೇಹಣ್ಣು.

**ಪ್ರಸಾದ ಸಾಹಿತ್ಯ** - ಗೋಧೀರವೆ, ಸಕ್ಕರೆ, ತುಪ್ಪ, ಹಾಲು, ಬಾಳೇಹಣ್ಣು.

**ಅಥ ಪೂಜಾ ।**

ಆಚಮ್ಯ ॥ ಕೇಶವ, ನಾರಾಯಣ, ಮಾಧವ....24 ॥ ಓಂ ಪ್ರಣವಸ್ಯ ಪರಬ್ರಹ್ಮ....॥ ಸಂಕಲ್ಪಃ, ಶುಭಾಭ್ಯಾಂ ಶುಭೇ ಶೋಭನೇ ಮುಹೂರ್ತೇ..... ಶುಭತಿಥೌ ಮಮ ಆತ್ಮನಃ ಶ್ರುತಿ-ಸ್ಮೃತಿಪುರಾಣೋಕ್ತಫಲಪ್ರಾಪ್ತ್ಯರ್ಥಂ, ಅಮುಕಗೋತ್ರೋತ್ಪನ್ನ ಅಮುಕ ಶರ್ಮಾಽಹಂ ಅಸ್ಮಾಕಂ ಸಕುಟುಂಬಾನಾಂ ಸಮಸ್ತದುರಿತೋಪಶಾಂತ್ಯರ್ಥಂ ಅಲಕ್ಷ್ಮೀ ಪರಿಹಾರ-ಪೂರ್ವಕಂ, ಲಕ್ಷ್ಮೀಪ್ರಾಪ್ತ್ಯಾದಿಮನೋಭಿಲಷಿತಕಾಮನಾಸಿದ್ಧಿದ್ವಾರಾ, ಇಹಾಮುತ್ರ ಚ ಸಕಲಭೋಗಾದಿಚತುರ್ವಿಧಪುರುಷಾರ್ಥಸಿದ್ಧ್ಯರ್ಥಂ, ಅಂಗೀಕೃತ ಸತ್ಯನಾರಾಯಣ-ವ್ರತಾಂಗತ್ವೇನ ಸಂಪಾದಿತಸಾಮಗ್ರ್ಯಾ, ಸೂರ್ಯಾದಿನವಗ್ರಹ, ಇಂದ್ರಾದ್ಯಷ್ಟ-ಲೋಕಪಾಲಕ, ಗಣಪತ್ಯಾದಿಚತುಷ್ಟಯದೇವತಾಪೂಜನಪೂರ್ವಕಂ, ಶ್ರೀಸತ್ಯನಾರಾಯಣ-ಪ್ರೀತ್ಯರ್ಥಂ, ಯಥಾಶಕ್ತ್ಯಾ ಯಥಾಮಿಲಿತೋಪಚಾರದ್ರವ್ಯೈಃ ಪುರುಷಸೂಕ್ತ, ಶ್ರೀಸೂಕ್ತ ಪುರಾಣೋಕ್ತಮಂತ್ರೈಶ್ಚ ಧ್ಯಾನಾವಾಹನಾದಿಷೋಡಶೋಪಚಾರೈಃ ಸತ್ಯನಾರಾಯಣಪೂಜನಂ ಕಥಾಶ್ರವಣಂ ಚ ಕರಿಷ್ಯೇ ॥ (ಎಂದು ಮಂತ್ರಾಕ್ಷತೆ ಮತ್ತು ಮೀಸಲು ನೀರನ್ನು ಅರ್ಘ್ಯಪಾತ್ರೆಗೆ ಬಿಡಬೇಕು)

ಆಸನವಿಧಿಂ ಶರೀರಶುದ್ಧ್ಯರ್ಥಂ ನ್ಯಾಸಾಂಶ್ಚ ತದನಂತರಂ ಗಣಪತಿಪೂಜನಂ, ಕಲಶಪೂಜನಂ, ಶಂಖ-ಘಂಟಾರ್ಚನಂ ಕರಿಷ್ಯೇ ॥ ಆದೌ ನಿರ್ವಿಘ್ನತಾಸಿದ್ಧ್ಯರ್ಥಂ ಮಹಾಗಣಪತಿಪೂಜಾಂ ಕರಿಷ್ಯೇ ॥ (ಮಂತ್ರಾಕ್ಷತೆ-ನೀರನ್ನು ಬಿಡಬೇಕು)

ಗಣಾನಾಂ ತ್ವಾ ಶೌನಕೋ ಗೃತ್ಸಮದೋ ಗಣಪತಿರ್ಜಗತೀ ಗಣಪತ್ಯಾವಾಹನೇ ವಿನಿಯೋಗಃ ॥

ಓಂ ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಮುಪಮಶ್ರವಸ್ತಮಂ ।
ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆನಃಶೃಣ್ವನ್ನೂತಿಭಿಃ ಸೀದಸಾದನಂ ॥

ಓಂ ಭೂಃ ಗಣಪತಿಂ ಆವಾಹಯಾಮಿ । ಓಂ ಭುವಃ ಗಣಪತಿಂ ಆವಾಹಯಾಮಿ । ಓಂ ಸ್ವಃ ಗಣಪತಿಂ ಆವಾಹಯಾಮಿ ॥ ಓಂ ಭೂರ್ಭುವಃಸ್ವಃ ಮಹಾಗಣಪತ್ಯಂತರ್ಗತ ಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀವಿಶ್ವಮೂರ್ತಯೇ ನಮಃ । ಧ್ಯಾಯಾಮಿ ಇತ್ಯಾದಿ ಷೋಡಶೋಪಚಾರಪೂಜಾಂ ಕೃತ್ವಾ,

ಓಂ ನಿಷುಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಂ ।
ನ ಋತೇ ತ್ವತ್ಕ್ರಿಯತೇ ಕಿಂಚನಾರೇ ಮಹಾಮರ್ಕಂ ಮಘವಂ ಚಿತ್ರಮರ್ಚ ॥

ಓಂ ಭೂರ್ಭುವಃಸ್ವಃ ಮಹಾಗಣಪತ್ಯಂತರ್ಗತಭಾರತೀರಮಣಮುಖ್ಯ-ಪ್ರಾಣಾಂತರ್ಗತಶ್ರೀವಿಶ್ವಮೂರ್ತಯೇ ನಮಃ । ಮಂತ್ರಪುಷ್ಪಂ ಸಮರ್ಪಯಾಮಿ ॥ ಪ್ರದಕ್ಷಿಣನಮಸ್ಕಾರಾನ್ ಸಮರ್ಪಯಾಮಿ । ಛತ್ರಂ ಸಮರ್ಪಯಾಮಿ । ಚಾಮರಂ ಸಮರ್ಪಯಾಮಿ । ವ್ಯಜನಂ ಸಮರ್ಪಯಾಮಿ । ದರ್ಪಣಂ ಸಮರ್ಪಯಾಮಿ । ನೃತ್ಯಂ ಸಮರ್ಪಯಾಮಿ । ಗೀತಂ ಸಮರ್ಪಯಾಮಿ । ವಾದ್ಯಂ ಸಮರ್ಪಯಾಮಿ । ಸರ್ವರಾಜೋಪಚಾರಾನ್ ಸಮರ್ಪಯಾಮಿ ॥

(ಮಂತ್ರಾಕ್ಷತೆಯನ್ನು ಸಮರ್ಪಿಸಬೇಕು)

**ಅಥ ಪ್ರಾರ್ಥನಾ ।**

ವಕ್ರತುಂಡ ಮಹಾಕಾಯ ಸೂರ್ಯಕೋಟಿಸಮಪ್ರಭ ।
ನಿರ್ವಿಘ್ನಂ ಕುರು ಮೇ ದೇವ ಸರ್ವಕಾರ್ಯೇಷು ಸರ್ವದಾ ॥
ಓಂ ಭೂರ್ಭುವಸ್ವಃ ಮಹಾಗಣಪತ್ಯಂತರ್ಗತಭಾರತೀರಮಣಮುಖ್ಯ-ಪ್ರಾಣಾಂತರ್ಗತ ಶ್ರೀವಿಶ್ವಮೂರ್ತಯೇ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥

ಅನೇನ ಕೃತಪೂಜನೇನ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಸಕಲ-ವಿಘ್ನಹರ್ತ್ರಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತಶ್ರೀವಿಶ್ವಂಭರಃ ಪ್ರೀಯತಾಂ ॥ (ಮಂತ್ರಾಕ್ಷತೆ-ನೀರನ್ನು ಅರ್ಘ್ಯಪಾತ್ರೆಗೆ ಬಿಡಬೇಕು)

(ದೇವರ ಎಡಬಲಗಳಲ್ಲಿರುವ ದೀಪಸ್ತಂಭಗಳಲ್ಲಿ ದೀಪಗಳನ್ನು ಹಚ್ಚುವಾಗ ಈ ಕೆಳಗಿನ ಮಂತ್ರವನ್ನು ಹೇಳಬೇಕು)

ಓಂ ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ ।
ಹವ್ಯವಾಡ್ ಜುಹ್ವಾಸ್ಯಃ ॥

ನೆಲದ ಮೇಲೆ ರಂಗೋಲಿ ಬರೆದು ಅದರ ಮೇಲೆ ಮಂಟಪವನ್ನಿಟ್ಟು, ಮಂಟಪದೊಳಗೆ ಕುಂಕುಮದಿಂದ ಅಷ್ಟದಲ ಪದ್ಮವನ್ನು ಬರೆಯಬೇಕು. ಅದರ ಮೇಲೆ ಅಕ್ಕಿಯನ್ನು ಹರಡಿ ನಂತರ ಮೀಸಲು ನೀರನ್ನು ತುಂಬಿಸಿದ ತಂಬಿಗೆಯಲ್ಲಿ ಚಿಲ್ಲರೆ ಅಡಿಕೆ ಬಟ್ಟಲು, ಅರಿಷಿಣ-ಕುಂಕುಮ, ಗಂಧಾಕ್ಷತೆ, ಪುಷ್ಪ, ಮಾವಿನ ತಳಿರುಗಳನ್ನು ಹಾಕಿ, ಶ್ರೀಸತ್ಯನಾರಾಯಣನ ಪಟವನ್ನು ಇಟ್ಟು, ಸಿದ್ಧಪಡಿಸಿದ ಕಲಶವನ್ನು ಮಂಟಪದಲ್ಲಿಟ್ಟು-ಕೊಳ್ಳಬೇಕು.

ಓಂ ಮಹೀದ್ಯೌಃ ಪೃಥಿವೀ ಚನ ಇಮಂ ಯಜ್ಞಂ ಮಿಮಿಕ್ಷತಾಂ ।
ಪಿಪೃತಾಂ ನೋ ಭರೀಮಭಿಃ ॥
(ಈ ಮಂತ್ರದಿಂದ ಭೂಮಿಯನ್ನು ಸ್ಪರ್ಶಿಸಿ)

ಓಂ ಓಷಧಯಃ ಸಂವದಂತೇ ಸೋಮೇನ ಸಹ ರಾಜ್ಞಾ ।
ಯಸ್ಮೈ ಕೃಣೋತಿ ಬ್ರಾಹ್ಮಣಸ್ತಂ ರಾಜನ್ಪಾರಯಾಮಸಿ ॥
(ಮಂಟಪದಲ್ಲಿ ಬರೆದ ಪದ್ಮದ ಮೇಲೆ ಧಾನ್ಯವನ್ನು ಹರಡುವಾಗ ಈ ಮಂತ್ರವನ್ನು ಹೇಳಬೇಕು)

ಓಂ ಆಕಲಶೇಷು ಧಾವತಿ ಪವಿತ್ರೇ ಪರಿಷಿಚ್ಯತೇ ।
ಉಕ್ಥೈರ್ಯಜ್ಞೇಷು ವರ್ಧತೇ ॥
(ಹರಡಿದ ಧಾನ್ಯದ ಮೇಲೆ ಕಲಶವನ್ನು ಸ್ಥಾಪಿಸಬೇಕು)

ಓಂ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣ್ಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥
(ಕಲಶವನ್ನು ಶುದ್ಧೋದಕದಿಂದ ತುಂಬಿಸಬೇಕು)

ಓಂ ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ ।
ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥
(ಕಲಶದೊಳಗೆ ಗಂಧವನ್ನು ಹಾಕಬೇಕು)

ಓಂ ಸ ಹಿ ರತ್ನಾನಿ ದಾಶುಷೇ ಸುವಾತಿ ಸವಿತಾ ಭಗಃ ।
ತಂ ಭಾಗಂ ಚಿತ್ರಮೀಮಹೇ ॥

ಓಂ ಹಿರಣ್ಯರೂಪಃ ಸ ಹಿರಣ್ಯ ಸಂದೃಗಪಾನ್ನಪಾತ್ಸೇದು ಹಿರಣ್ಯವರ್ಣಃ ।
ಹಿರಣ್ಯಯಾತ್ಪರಿಯೋನೇರ್ನಿಷದ್ಯಾ ಹಿರಣ್ಯದಾದದತ್ಯನ್ನಮಸ್ಮೈ ॥
(ಕಲಶದಲ್ಲಿ ಪಂಚರತ್ನಗಳ ಬದಲಿಗೆ ಐದು ಚಿಲ್ಲರೆ ನಾಣ್ಯಗಳನ್ನು ಹಾಕಬೇಕು)

ಓಂ ಕಾಂಡಾತ್ ಕಾಂಡಾತ್ಪ್ರರೋಹಂತೀ ಪರುಷಃ ಪರುಷಃ ಪರಿ ।
ಏವಾ ನೋ ದೂರ್ವೇ ಪ್ರತನು ಸಹಸ್ರೇಣ ಶತೇನ ಚ ॥
(ಕಲಶದೊಳಗೆ ಎಳೆಗರಿಕೆಯನ್ನು ಹಾಕಬೇಕು)

ಓಂ ಅಶ್ವತ್ಥೇವೋ ನಿಷದನಂ ಪರ್ಣೇವೋ ವಸತಿಷ್ಕೃತಾ ।
ಗೋಭಾಜ ಇತ್ಕಿಲಾಸಥ ಯತ್ಸನವಥ ಪೂರುಷಂ ॥
(ಕಲಶದೊಳಗೆ ಮಾವಿನ ಗುಚ್ಛವನ್ನು ಇಡಬೇಕು)

ಓಂ ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾಯಾಶ್ಚ ಪುಷ್ಪಿಣೀಃ ।
ಬೃಹಸ್ಪತಿ ಪ್ರಸೂತಾಸ್ತಾನೋ ಮುಂಚಂತ್ವಂಹಸಃ ॥
(ಅಡಿಕೆ ಬೆಟ್ಟವನ್ನು ಕಲಶದೊಳಗೆ ಹಾಕಿ, ಕಲಶದ ಮೇಲೆ ತೆಂಗಿನಕಾಯಿಯನ್ನು ಇಡಬೇಕು)

ಓಂ ಯುವಾ ಸುವಾಸಾಃ ಪರಿವೀತ ಆಗಾತ್ ಸ ಉ ಶ್ರೇಯಾನ್ ಭವ ಜಾಯಮಾನಃ ।
ತಂಧೀರಾಸಃ ಕವಯ ಉನ್ನಯಂತಿ ಸ್ವಾಧ್ಯೋ೩ ಮನಸಾ ದೇವಯಂತಃ ॥
(ಕಲಶಕ್ಕೆ ವಸ್ತ್ರವನ್ನು ಹೊದಿಸಬೇಕು)

ಓಂ ಪೂರ್ಣಾದರ್ವಿಪರಾಪತ ಸುಪೂರ್ಣಾ ಪುನರಾಪತ ।
ವಸ್ನೇವ ವಿಕ್ರೀಣಾವಹಾ ಇಷಮೂರ್ಜಂ ಶತಕ್ರತೋ ॥
(ಕಲಶದಲ್ಲಿ ಅಕ್ಕಿ ತುಂಬಿದ ತಾಮ್ರದ ಪೂರ್ಣಪಾತ್ರೆಯನ್ನಿಟ್ಟು, ಅದರ ಮೇಲೆ ಕುಂಕುಮದಿಂದ ಅಷ್ಟದಳ ಪದ್ಮವನ್ನು ಬರೆಯಿರಿ)

(ಕಲಶದೊಳಗೆ ವರುಣನನ್ನು ಆವಾಹಿಸುವುದಕ್ಕಾಗಿ ಕೆಳಗಿನ ಮಂತ್ರ ಹೇಳಿ ಹೂ-ತುಳಸಿ-ಮಂತ್ರಾಕ್ಷತೆಗಳನ್ನು ಸಮರ್ಪಿಸಿ)
ತತ್ವಾಯಾಮಿ ಶುನಃಶೇಪೋ ವರುಣಸ್ತ್ರಿಷ್ಟುಪ್ ಕಲಶೇ ವರುಣಾವಾಹನೇ ವಿನಿಯೋಗಃ ॥

ಓಂ ತತ್ತ್ವಾಯಾಮಿ ಬ್ರಹ್ಮಣಾ ವಂದಮಾನಃ ತದಾಶಾಸ್ತೇ ಯಜಮಾನೋ ಹವಿರ್ಭಿಃ ।
ಅಹೇಳಮಾನೋ ವರುಣೇಹಬೋಧ್ಯುರುಶಂಸಮಾನ ಆಯುಃ ಪ್ರಮೋಷೀಃ ॥
ಇತಿ ಕಲಶೇ ವರುಣಮಾವಾಹ್ಯ ॥

ಓಂ ಭೂರ್ಭುವಃಸ್ವಃ ವರುಣಾಯ ನಮಃ ಚಂದನಂ ಸಮರ್ಪಯಾಮಿ । ಓಂ ಭೂರ್ಭುವಃಸ್ವಃ ವರುಣಾಯ ನಮಃ ಅಕ್ಷತಾನ್ ಸಮರ್ಪಯಾಮಿ । ಓಂ ಭೂರ್ಭುವಃಸ್ವಃ ವರುಣಾಯ ನಮಃ ಹರಿದ್ರಾ-ಕುಂಕುಮಂ ಸಮರ್ಪಯಾಮಿ ॥ ಇತಿ ನಾಮಮಂತ್ರೇಣ ವರುಣಪೂಜಾ ಕಾರ್ಯಾ ॥

(ನಾಮಮಂತ್ರಗಳಿಂದ ವರುಣನಿಗೆ ಪಂಚೋಪಚಾರ ಮಾಡಬೇಕು)

ಓಂ ಅವತೇಹೇಳೋವರುಣ ನಮೋಭಿರವ ಯಜ್ಞೇಭಿರೀಮಹೇ ಹವಿರ್ಭಿಃ ।
ಕ್ಷಯಂ ನಸ್ಮಭ್ಯಮಸುರಪ್ರಚೇತಾ ರಾಜನ್ನೇನಾಂಸಿ ಶಿಶ್ರಥಃಕೃತಾನಿ ॥
ವರುಣಾಯ ನಮಃ, ಮಂತ್ರಪುಷ್ಪಂ ಸಮರ್ಪಯಾಮಿ ।
(ಮೇಲಿನ ಮಂತ್ರ ಹೇಳಿ ವರುಣನಿಗೆ ಮಂತ್ರಪುಷ್ಪವನ್ನು ಸಮರ್ಪಿಸಬೇಕು)
ಪ್ರದಕ್ಷಿಣ, ನಮಸ್ಕಾರಾನ್ ಸಮರ್ಪಯಾಮಿ ॥

ಅನಯಾ ಪೂಜಯಾ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ ಶ್ರೀಮಹಾ-ವರುಣಾಂತರ್ಗತಭಾರತೀರಮಣಮುಖ್ಯಪ್ರಾಣಾಂತರ್ಗತ ಭಗವಾನ್ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ॥ (ಎಂದು ಮಂತ್ರಾಕ್ಷತೆ-ನೀರನ್ನು ಅರ್ಘ್ಯಪಾತ್ರೆಗೆ ಬಿಡಬೇಕು)

**ಕಲಶಪೂಜಾ ।**

ಕಲಶಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ಗಂಧಾಕ್ಷತೆ ಹಚ್ಚಿ ಅದರೊಳಗೆ ತುಳಸೀದಳ - ಬಿಡಿಹೂಗಳನ್ನು ಹಾಕಿಕೊಂಡು ಕಲಶದ ಮೇಲೆ ಬಲಗೈಯನ್ನಿಟ್ಟು ಕಲಶಪೂಜೆ ಮಾಡಬೇಕು. ಈ ಕಲಶದ ನೀರನ್ನೇ ಪೂಜೆಗೆ ಉಪಯೋಗಿಸಬೇಕು. ಪಂಚಪಾತ್ರೆಯ ನೀರನ್ನು ಆಚಮನಕ್ಕೆ ಮಾತ್ರ ಉಪಯೋಗಿಸಬೇಕು.

ಓಂ ॥ ಆಕಲಶೇಷು ಧಾವತಿ ಪವಿತ್ರೇ ಪರಿಷಿಚ್ಯತೇ ।
ಉಕ್ಥೈರ್ಯಜ್ಞೇಷು ವರ್ಧತೇ ॥
ಕಲಶಂ ಗಂಧಾಕ್ಷತಾಪತ್ರಪುಷ್ಪೈರಭ್ಯರ್ಚ್ಯ ॥
ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಸ್ಸಮಾಶ್ರಿತಃ ।
ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಃ ಸ್ಮೃತಾಃ ॥
ಕುಕ್ಷೌ ತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ ।
ಋಗ್ವೇದೋಽಥ ಯಜುರ್ವೇದಸ್ಸಾಮವೇದೋ ಹ್ಯಥರ್ವಣಃ ॥
ಅಂಗೈಶ್ಚ ಸಹಿತಾಸ್ಸರ್ವೇ ಕಲಶಂ ತು ಸಮಾಶ್ರಿತಾಃ ।
ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ ॥
ಆಯಾಂತು ದೇವಪೂಜಾರ್ಥಮಭಿಷೇಕಾರ್ಥಸಿದ್ಧಯೇ ॥

ಓಂ ॥ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಂ ಸಚತಾ ಪರುಷ್ಣಿಯಾ ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥

ನಿರ್ವಿಷೀಕರಣಾರ್ಥಂ ತಾರ್ಕ್ಷ್ಯಮುದ್ರಾಂ ಪ್ರದರ್ಶಯಾಮಿ । ಅಮೃತೀಕರಣಾರ್ಥಂ ಧೇನುಮುದ್ರಾಂ ಪ್ರದರ್ಶಯಾಮಿ । ಪವಿತ್ರೀಕರಣಾರ್ಥಂ ಶಂಖಮುದ್ರಾಂ ಪ್ರದರ್ಶಯಾಮಿ । ಸಂರಕ್ಷಣಾರ್ಥಂ ಚಕ್ರಮುದ್ರಾಂ ಪ್ರದರ್ಶಯಾಮಿ । ದಿಗ್ಬಂಧನಾರ್ಥಂ ಗದಾಮುದ್ರಾಂ ಪ್ರದರ್ಶಯಾಮಿ ॥ ಜಲಶೋಧನಾರ್ಥಂ ಪದ್ಮಮುದ್ರಾಂ ಪ್ರದರ್ಶಯಾಮಿ ॥ ಓಂ ನಮೋ ನಾರಾಯಣಾಯೇತಿ ಮೂಲಮಂತ್ರಮಷ್ಟವಾರಂ ಜಪಿತ್ವಾ ॥

(ಕಲಶಕ್ಕೆ ತಾರ್ಕ್ಷ್ಯಾದಿ ಮುದ್ರೆಗಳನ್ನು ತೋರಿಸಿ, ನಾರಾಯಣಷ್ಟಾಕ್ಷರದಿಂದ 8 ಬಾರಿ ಕಲಶವನ್ನು ಅಭಿಮಂತ್ರಿಸಿ, ಮುಂದಿನ ಶ್ಲೋಕಗಳನ್ನು ಪಠಿಸಬೇಕು)

ಏಕಪಂಚಾಶದ್ವರ್ಣಾನಾಂ ಚತುರ್ವಿಂಶತಿಮೂರ್ತಯಃ ।
ಆತ್ಮಾದ್ಯಾ ವಾಸುದೇವಾದ್ಯಾ ವಿಶ್ವಾದ್ಯಾ ಮತ್ಸ್ಯಕಚ್ಛಪೌ ॥
ಕೋಲೋನೃಸಿಂಹಃ ಸ ವಟುರ್ಜಾಮದಗ್ನ್ಯರಘೂದ್ವಹೌ ।
ವಾಸಿಷ್ಠಯಾದವೌ ಕೃಷ್ಣಾವಾತ್ರೇಯೌ ಬುದ್ಧಕಲ್ಕಿನೌ ॥

ಶಿಂಶುಮಾರಶ್ಚೇತಿ ಶತಂ ಕಲಾಃ ಕಲಶದೇವತಾಃ ।
ಏತಾಭಿಃ ಸಹಿತಾಂ ಮೂಲಮೂರ್ತಿಂ ಕುಂಭೋದಕೇ ಸುಧೀಃ ॥

ಕಲಶಃ ಕೀರ್ತಿಮಾಯುಷ್ಯಂ ಪ್ರಜ್ಞಾಂ ಮೇಧಾಂ ಶ್ರಿಯಂ ಬಲಮ್ ।
ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಸಾಧಯೇತ್ ॥

ಸರ್ವತೀರ್ಥಮಯೋ ಯಸ್ಮಾತ್ಸರ್ವಕ್ಷೇತ್ರಮಯೋ ಯತಃ ।
ಅತೋ ಹರಿಪ್ರಿಯೋಽಸಿ ತ್ವಂ ಪೂರ್ಣಕುಂಭ ನಮೋಽಸ್ತು ತೇ ॥

ಕಲಶದೇವತಾಂತರ್ಯಾಮಿ ಭಾರತೀರಮಣಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀ-ನಾರಾಯಣಾಯ ನಮಃ, ಧ್ಯಾನಾದಿಷೋಡಶೋಪಚಾರಪೂಜಾಂ ಸಮರ್ಪಯಾಮಿ ॥

'ಓಂ ನಮೋ ನಾರಾಯಣಾಯ' ಎಂದು ಅಷ್ಟಾಕ್ಷರಮಂತ್ರದಿಂದ ಕಲಶದ ನೀರನ್ನು 8-12 ಬಾರಿ ಅಭಿಮಂತ್ರಿಸಿ, ಉದ್ಧರಣೆಯಿಂದ ಆ ನೀರನ್ನು ಎಡಗೈಯಲ್ಲಿ ಹಿಡಿದುಕೊಂಡು ಬಲಗೈಯಲ್ಲಿ ತುಳಸೀದಳ ಅಥವಾ ಬಿಡಿಹೂವೊಂದನ್ನು ಹಿಡಿದುಕೊಂಡು, ಆ ನೀರನ್ನು ಪೂಜಾಸಾಮಗ್ರಿಗಳಿಗೆಲ್ಲಾ ಪ್ರೋಕ್ಷಿಸಿ, ಕೊನೆಗೆ ತನಗೂ ಪ್ರೋಕ್ಷಿಸಿಕೊಂಡು ಉಳಿದ ನೀರನ್ನು ಮತ್ತು ಕೈಯಲ್ಲಿರುವ ತುಳಸೀ / ಹೂವನ್ನು ಅರ್ಘ್ಯಪಾತ್ರೆಗೆ ಹಾಕಬೇಕು. ಪ್ರೋಕ್ಷಣೆ ಮಾಡಿಕೊಳ್ಳುವಾಗ "ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ । ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥" ಎಂಬ ಮಂತ್ರವನ್ನು ಹೇಳಬೇಕು.

**ಅಥ ಶಂಖಪೂಜಾ ।**

(ಶಂಖದೊಳಗೆ ಮೀಸಲು ನೀರನ್ನು ಹಾಕಿ, ಅದರ ಮೇಲೆ ತುಳಸೀ-ಪುಷ್ಪಗಳನ್ನಿಟ್ಟು, ಕೆಳಗಿನ ಮಂತ್ರಗಳಿಂದ ಅಭಿಮಂತ್ರಣ ಮಾಡಬೇಕು)

ಶಂಖಂ ಚಂದ್ರಾರ್ಕದೈವತ್ಯಂ ಮಧ್ಯೇ ವರುಣದೈವತಂ ।
ಪೃಷ್ಠೇ ಪ್ರಜಾಪತಿಂ ವಿಂಧ್ಯಾದಗ್ರೇ ಗಂಗಾಸರಸ್ವತೀ ॥

ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।
ನಮಿತಃ ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತು ತೇ ॥

ಓಂ ಪಾಂಚಜನ್ಯಾಯ ವಿದ್ಮಹೇ ಮಹಾದರಾಯ ಧೀಮಹಿ ।
ತನ್ನಃ ಶಂಖಃ ಪ್ರಚೋದಯಾತ್ ॥
ಶಂಖದೇವತಾಭ್ಯೋ ನಮಃ ॥ ಸಕಲಪೂಜಾರ್ಥೇ ಅಕ್ಷತಾನ್ ಸಮರ್ಪಯಾಮಿ ॥

ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।
ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥
(ಶಂಖದೊಳಗಿರುವ ನೀರನ್ನು ಬಿಡಿಹೂವಿನಿಂದ ಪೂಜಾಸಾಧನಗಳಿಗೂ, ತನಗೂ ಪ್ರೋಕ್ಷಿಸಿಕೊಳ್ಳಬೇಕು)

**ಅಥ ಘಂಟಾರ್ಚನಂ ।**

(ಘಂಟಾನಾದ ಮಾಡಿ ಘಂಟೆಗೆ ಮಂತ್ರಾಕ್ಷತೆಯನ್ನು ಸಮರ್ಪಿಸಬೇಕು)

ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಂ ।
ಕುರು ಘಂಟಾರವಂ ತತ್ರ ದೇವತಾಹ್ವಾನಲಾಂಛನಂ ॥

ಅಜ್ಞಾನಾದ್ ಜ್ಞಾನತೋ ವಾಽಪಿ ಕಾಂಸ್ಯಘಂಟಾಂ ನ ವಾದಯೇತ್ ।
ರಾಕ್ಷಸಾನಾಂ ಪಿಶಾಚಾನಾಂ ತದ್ದೇಶೇ ವಸತಿರ್ಭವೇತ್ ।
ತಸ್ಮಾತ್ ಸರ್ವಪ್ರಯತ್ನೇನ ಘಂಟಾನಾದಂ ಚ ಕಾರಯೇತ್ ॥

ಘಂಟಾಗ್ರೇ ಬ್ರಹ್ಮದೈವತ್ಯಂ ಮುಕುಟೇ ರುದ್ರದೇವತಾ ।
ನಾದೇ ಸರಸ್ವತೀಂ ಚೈವ ನಾಲೇ ನಾಗಾಧಿದೈವತಂ ॥
ಘಂಟಾದೇವತಾಭ್ಯೋ ನಮಃ ॥ ಸಕಲಪೂಜಾರ್ಥೇ ಅಕ್ಷತಾನ್ ಸಮರ್ಪಯಾಮಿ ॥

ತದಂಗ ನವಗ್ರಹಪೂಜನಂ ಕರಿಷ್ಯೇ ॥

## ॥ ನವಗ್ರಹಪೂಜಾ ॥

ಆಕೃಷ್ಣೇನಾಂಗಿರಸೋ ಹಿರಣ್ಯಸ್ತೂಪಃ । ಸವಿತಾ ತ್ರಿಷ್ಟುಪ್ ।
**ಸೂರ್ಯಾವಾಹನೇ ವಿನಿಯೋಗಃ ॥**

ಓಂ ಆಕೃಷ್ಣೇನ ರಜಸಾ ವರ್ತಮಾನೋ ನಿವೇಶಯನ್ನಮೃತಂ ಮರ್ತ್ಯಂ ಚ ।
ಹಿರಣ್ಯಯೇನ ಸವಿತಾ ರಥೇನಾದೇವೋ ಯಾತಿ ಭುವನಾನಿ ಪಶ್ಯನ್ ॥
ಭೂರ್ಭುವಃಸ್ವಃ ಸೂರ್ಯಾಯ ನಮಃ ಸೂರ್ಯಂ ಆವಾಹಯಾಮಿ ॥1॥
(ಗೋದಿಯಲ್ಲಿ ಅಥವಾ ಅಡಿಕೆಯಲ್ಲಿ ಸೂರ್ಯನನ್ನು ಆವಾಹಿಸಿರಿ)

ಆಪ್ಯಾಯಸ್ವೇತಿ ಗೌತಮಃ ಸೋಮೋ ಗಾಯತ್ರೀ ।
**ಚಂದ್ರಾವಾಹನೇ ವಿನಿಯೋಗಃ ॥**

ಓಂ ಆಪ್ಯಾಯ ಸ್ವಸಮೇತುತೇ ವಿಶ್ವತಃ ಸೋಮವೃಷ್ಣ್ಯಂ ।
ಭವಾ ವಾಜಸ್ಯ ಸಂಗಥೇ ॥
ಭೂರ್ಭುವಃಸ್ವಃ ಚಂದ್ರಾಯ ನಮಃ ಚಂದ್ರಂ ಆವಾಹಯಾಮಿ ॥2॥
(ಅಕ್ಕಿಯಲ್ಲಿ ಅಥವಾ ಅಡಿಕೆಯಲ್ಲಿ ಚಂದ್ರನನ್ನು ಆವಾಹಿಸಿರಿ)

ಅಗ್ನಿರ್ಮೂರ್ಧಾ ವಿರೂಪೋಽಂಗಾರಕೋ ಗಾಯತ್ರೀ ।
**ಅಂಗಾರಕಾವಾಹನೇ ವಿನಿಯೋಗಃ ॥**

ಓಂ ಅಗ್ನಿರ್ಮೂರ್ಧಾ ದಿವಃಕಕುತ್ಪತಿಃ ಪೃಥಿವ್ಯಾ ಅಯಂ ।
ಅಪಾಂರೇತಾಂಸಿ ಜಿನ್ವತಿ ॥
ಭೂರ್ಭುವಃಸ್ವಃ ಅಂಗಾರಕಾಯ ನಮಃ ಅಂಗಾರಕಂ ಆವಾಹಯಾಮಿ ॥3॥
(ತೊಗರಿಯಲ್ಲಿ ಅಥವಾ ಅಡಿಕೆಯಲ್ಲಿ ಮಂಗಳನನ್ನು ಆವಾಹಿಸಿರಿ)

ಉದ್ಬುಧ್ಯಧ್ವಂ ಬುಧೋ ಬುಧಸ್ತ್ರಿಷ್ಟುಪ್ ।
**ಬುಧಾವಾಹನೇ ವಿನಿಯೋಗಃ ॥**

ಓಂ ಉದ್ಬುಧ್ಯಧ್ವಂ ಸಮನಸಃ ಸಖಾಯಃ ಸಮಗ್ನಿಮಿಂಧ್ವಂ ಬಹವಃ ಸನೀಳಾಃ ।
ದಧಿಕ್ರಾಮಗ್ನಿ ಮುಷಸಂಚ ದೇವೀಮಿಂದ್ರಾವತೋಽವಸೇನಿಹ್ವಯೇವಃ ॥
ಭೂರ್ಭುವಃಸ್ವಃ ಬುಧಾಯ ನಮಃ ಬುಧಂ ಆವಾಹಯಾಮಿ ॥4॥
(ಹೆಸರುಕಾಳಿನಲ್ಲಿ ಅಥವಾ ಅಡಿಕೆಯಲ್ಲಿ ಬುಧನನ್ನು ಆವಾಹಿಸಿರಿ)

ಬೃಹಸ್ಪತೇ ಗೃತ್ಸಮದೋ ಬೃಹಸ್ಪತಿಸ್ತ್ರಿಷ್ಟುಪ್ ।
**ಬೃಹಸ್ಪತ್ಯಾವಾಹನೇ ವಿನಿಯೋಗಃ ॥**
ಓಂ ಬೃಹಸ್ಪತೇ ಅತಿಯದರ್ಯೋ ಅರ್ಹಾದ್ದ್ಯುಮದ್ವಿಭಾತಿ ಕ್ರತು ಮಜ್ಜನೇಷು ।
ಯದ್ದೀದಯಚ್ಛವಸ ಋತಪ್ರಜಾತ ತದಸ್ಮಾಸು ದ್ರವಿಣಂ ಧೇಹಿ ಚಿತ್ರಂ ॥
ಭೂರ್ಭುವಃಸ್ವಃ ಬೃಹಸ್ಪತಯೇ ನಮಃ ಬೃಹಸ್ಪತಿಂ ಆವಾಹಯಾಮಿ ॥5॥
(ಕಡಲೆಯಲ್ಲಿ ಅಥವಾ ಅಡಿಕೆಯಲ್ಲಿ ಗುರುವನ್ನು ಆವಾಹಿಸಿರಿ)

ಶುಕ್ರಂತೇ ಭರದ್ವಾಜಃ ಶುಕ್ರಸ್ತ್ರಿಷ್ಟುಪ್ ।
**ಶುಕ್ರಾವಾಹನೇ ವಿನಿಯೋಗಃ ॥**

ಓಂ ಶುಕ್ರಂತೇ ಅನ್ಯದ್ಯಜತಂತೇ ಅನ್ಯದ್ವಿಷುರೂಪೇ ಅಹನೀದ್ಯೌರಿವಾಸಿ ।
ವಿಶ್ವಾಹಿಮಾಯಾಅವಸಿ ಸ್ವಧಾವೋ ಭದ್ರಾತೇ ಪೂಷನ್ನಿಹರಾತಿರಸ್ತು ॥
ಭೂರ್ಭುವಃಸ್ವಃ ಶುಕ್ರಾಯ ನಮಃ ಶುಕ್ರಂ ಆವಾಹಯಾಮಿ ॥6॥
(ಅವರೆಯಲ್ಲಿ ಅಥವಾ ಅಡಿಕೆಯಲ್ಲಿ ಶುಕ್ರನನ್ನು ಆವಾಹಿಸಿರಿ)

ಶಮಗ್ನಿ ರಿರಿಂಬಿಠಿಃ ಶನೈಶ್ಚರ ಉಷ್ಣಿಕ್ ।
**ಶನೈಶ್ಚರಾವಾಹನೇ ವಿನಿಯೋಗಃ ॥**
ಓಂ ಶಮಗ್ನಿರಗ್ನಿಭಿಃ ಕರಚ್ಛಂನಸ್ತಪತು ಸೂರ್ಯಃ ।
ಶಂ ವಾತೋ ವಾತ್ವರಪಾ ಅಪಸ್ರಿಧಃ ॥
ಭೂರ್ಭುವಃಸ್ವಃ ಶನೈಶ್ಚರಾಯ ನಮಃ ಶನೈಶ್ಚರಂ ಆವಾಹಯಾಮಿ ॥7॥
(ಎಳ್ಳಿನಲ್ಲಿ ಅಥವಾ ಅಡಿಕೆಯಲ್ಲಿ ಶನೈಶ್ಚರನನ್ನು ಆವಾಹಿಸಿರಿ)
ಕಯಾನೋ ವಾಮದೇವೋ ರಾಹುರ್ಗಾಯತ್ರೀ ।
**ರಾಹ್ವಾವಾಹನೇ ವಿನಿಯೋಗಃ ॥**

ಓಂ ಕಯಾನಶ್ಚಿತ್ರ ಆಭುವದೂತೀ ಸದಾವೃಧಃ ಸಖಾ ।
ಕಯಾ ಶಚಿಷ್ಠಯಾ ವೃತಾ ॥
ಭೂರ್ಭುವಃಸ್ವಃ ರಾಹವೇ ನಮಃ ರಾಹುಂ ಆವಾಹಯಾಮಿ ॥8॥
(ಉದ್ದಿನಲ್ಲಿ ಅಥವಾ ಅಡಿಕೆಯಲ್ಲಿ ರಾಹುವನ್ನು ಆವಾಹಿಸಿರಿ)

ಕೇತುಂ ಕೃಣ್ವನ್ನಮಧುಚ್ಛಂದಾಃ । ಕೇತುರ್ಗಾಯತ್ರೀ ।
**ಕೇತ್ವಾವಾಹನೇ ವಿನಿಯೋಗಃ ॥**

ಓಂ ಕೇತುಂ ಕೃಣ್ವನ್ನ ಕೇತವೇ ಪೇಶೋ ಮರ್ಯಾ ಅಪೇಶಸೇ ।
ಸಮುಷದ್ಭಿರಜಾಯಥಾಃ ॥
ಭೂರ್ಭುವಃಸ್ವಃ ಕೇತವೇ ನಮಃ ಕೇತುಂ ಆವಾಹಯಾಮಿ ॥9॥
(ಹುರುಳಿಯಲ್ಲಿ ಅಥವಾ ಅಡಿಕೆಯಲ್ಲಿ ಕೇತುವನ್ನು ಆವಾಹಿಸಿರಿ)

**ಅಥ ಅಷ್ಟದಲೇಷು ।**

ಇಂದ್ರಾಯ ನಮಃ । ಅಗ್ನಯೇ ನಮಃ । ಯಮಾಯ ನಮ । ನಿರ್ಋತಯೇ ನಮಃ । ವರುಣಾಯ ನಮಃ । ವಾಯವೇ ನಮಃ । ಸೋಮಾಯ ನಮಃ । ಈಶಾನಾಯ ನಮಃ ।
(ಕಲಶದ ಸುತ್ತಲೂ ಎಂಟು ದಿಕ್ಕಿನಲ್ಲಿ ಇಟ್ಟಿರುವ ಅಡಿಕೆಗಳಲ್ಲಿ ದಿಕ್ಪಾಲಕರನ್ನು ಮಂತ್ರಾಕ್ಷತೆಯಿಂದ ಆವಾಹಿಸಬೇಕು)

**ಚತುರ್ದಲೇಷು ।**

ಗಣಪತಯೇ ನಮಃ । ದುರ್ಗಾಯೈ ನಮಃ । ಕ್ಷೇತ್ರಪಾಲಾಯ ನಮಃ । ವಾಸ್ತೋಷ್ಪತಯೇ ನಮಃ ॥
(ನಂತರ ನವಗ್ರಹಾದಿ ದೇವತೆಗಳನ್ನು ಷೋಡಶೋಪಚಾರದಿಂದ ಪೂಜಿಸಬೇಕು)

ಯಸ್ಯಸ್ಮೃತ್ಯಾ ......... ತದಸ್ತು ಮೇ ॥ ಅನಯಾ ಪೂಜಯಾ ರವ್ಯಾದಿ ನವಗ್ರಹದೇವತಾಃ ಪ್ರೀಯತಾಂ ॥

ಅಷ್ಟದಲದ ಮಧ್ಯದಲ್ಲಿ ಸಪರಿವಾರನಾದ ಶ್ರೀಲಕ್ಷ್ಮೀಸಹಿತ ಸತ್ಯನಾರಾಯಣನನ್ನು ಆವಾಹಿಸಬೇಕು.

**ಪೀಠಪೂಜಾ ।**

ಪೀಠಮಧ್ಯೇ ಪರದೇವತಾಯೈ ಶ್ರೀಲಕ್ಷ್ಮೀನಾರಾಯಣಾಯ ನಮಃ । ದೇವಸ್ಯ ವಾಮಭಾಗೇ ಗುರವೇ ವಾಯವೇ ನಮಃ । ದಕ್ಷಿಣೇ ಸರ್ವದೇವತಾಭ್ಯೋ ಬ್ರಹ್ಮರುದ್ರಾದಿಭ್ಯೋ ನಮಃ । ಪುನರ್ವಾಮೇ ಸನಕಾದಿಸರ್ವಗುರುಭ್ಯೋ ನಮಃ । ಆಗ್ನೇಯೇ ಗಂ ಗರುಡಾಯ ನಮಃ । ನೈಋತ್ಯಾಂ ವ್ಯಾಂ ವೇದವ್ಯಾಸಾಯ ನಮಃ । ವಾಯವ್ಯೇ ದುಂ ದುರ್ಗಾಯೈ ನಮಃ । ಈಶಾನ್ಯೇ ಸಂ ಸರಸ್ವತ್ಯೈ ನಮಃ ॥ ಏತಾಃ **ಪೀಠಪಾದದೇವತಾಃ** ॥ ಧರ್ಮಾಧಿಪತಯೇ ಯಮಾಯ ನಮಃ । ಜ್ಞಾನಾಧಿಪತಯೇ ವಾಯವೇ ನಮಃ । ವೈರಾಗ್ಯಾಧಿಪತಯೇ ರುದ್ರಾಯ ನಮಃ । ಐಶ್ವರ್ಯಾಧಿಪತಯೇ ಇಂದ್ರಾಯ ನಮಃ ॥ ಏತಾಃ **ಪೀಠಫಲಕದೇವತಾಃ** ॥ ಅಧರ್ಮಾಧಿಪತಯೇ ನಿರ್ಋತಯೇ

... । ಅಜ್ಞಾನಾಧಿಪತಯೇ ದುರ್ಗಾಯೈ ನಮಃ । ಅವೈರಾಗ್ಯಾಧಿಪತಯೇ ಕಾಮಾಯ ನಮಃ । ಅನೈಶ್ವರ್ಯಾಧಿಪತಯೇ ರುದ್ರಾಯ ನಮಃ ॥ ಮಧ್ಯೇ ಪಾತಾಲೇ ಪರಮಪುರುಷಾಯ ನಮಃ । ತದುಪರ್ಯುದಕೇ ಬ್ರಹ್ಮಾಂಡಾಧಾರಾಯ ವಿಷ್ಣುಕೂರ್ಮಾಯ ನಮಃ । ತದುಪರಿ ಗರ್ಭೋದಕೇ ಕೂರ್ಮರೂಪಾಯ ವಿಷ್ಣವೇ ನಮಃ । ತತ್ಪುಚ್ಛಾಶ್ರಿತಾಯ ವಾಯುಕೂರ್ಮಾಯ ನಮಃ । ತತ್ಪುಚ್ಛಾಶ್ರಿತಾಯ ಸಹಸ್ರಫಣಾಮಂಡಲಮಂಡಿತಾಯ ಶ್ರೀಮದನಂತಾಯ ನಮಃ । ಪೃಥಿವ್ಯಭಿಮಾನಿನ್ಯೈ ಧರಾಯೈ ನಮಃ । ಕ್ಷೀರಸಾಗರಾಭಿಮಾನಿನೇ ವರುಣಾಯ ನಮಃ । ಶ್ವೇತದ್ವೀಪಾತ್ಮಿಕಾಯೈ ರಮಾಯೈ ನಮಃ । ತತ್ರ ನವರತ್ನಖಚಿತಚತುಸ್ತಂಭಯುಕ್ತಮಹಾಮಂಟಪಾತ್ಮಿಕಾಯೈ ಶ್ರೀಲಕ್ಷ್ಮ್ಯೈ ನಮಃ । ಪದ್ಮಾತ್ಮಿಕಾಯೈ ಶ್ರಿಯೈ ನಮಃ । ಕಂದಾತ್ಮಿಕಾಯೈ ಶ್ರಿಯೈ ನಮಃ । ನಾಳಾತ್ಮಿಕಾಯೈ ಶ್ರಿಯೈ ನಮಃ । ತತ್ಕರ್ಣಿಕಾತ್ಮಿಕಾಯೈ ಶ್ರಿಯೈ ನಮಃ ॥ ಪದ್ಮಾದ್ಬಹಿಃ ಸೂರ್ಯಮಂಡಲಾಧಿಪತಯೇ ಶ್ರೀನಾರಾಯಣಾಯ ನಮಃ । ಸೋಮಮಂಡಲಾಧಿ- ಪತಯೇ ಶ್ರೀವಿಷ್ಣವೇ ನಮಃ । ಹುತಾಶನಮಂಡಲಾಧಿಪತಯೇ ಶ್ರೀಲಕ್ಷ್ಮೀನರಸಿಂಹಾಯ ನಮಃ ॥ ದಕ್ಷಿಣೇ ಸತ್ವಾಭಿಮಾನಿನ್ಯೈ ಶ್ರಿಯೈ ನಮಃ । ವಾಮೇ ರಜೋಭಿಮಾನಿನ್ಯೈ ಧರಾಯೈ ನಮಃ । ಪೃಷ್ಠೇ ತಮೋಭಿಮಾನಿನ್ಯೈ ದುರ್ಗಾಯೈ ನಮಃ ॥ ಪೂರ್ವೇ ಆತ್ಮನೇ ನಮಃ । ದಕ್ಷಿಣೇ ಅಂತರಾತ್ಮನೇ ನಮಃ । ಪಶ್ಚಿಮೇ ಪರಮಾತ್ಮನೇ ನಮಃ । ಉತ್ತರೇ ಜ್ಞಾನಾತ್ಮನೇ ನಮಃ ॥ ವಿಮಲಾಯೈ ನಮಃ । ಉತ್ಕರ್ಷಿಣ್ಯೈ ನಮಃ । ಜ್ಞಾನಾಯೈ ನಮಃ । ಕ್ರಿಯಾಯೈ ನಮಃ । ಯೋಗಾಯೈ ನಮಃ । ಪ್ರಹ್ವ್ಯೈ ನಮಃ । ಸತ್ಯಾಯೈ ನಮಃ । ಈಶಾನಾಯೈ ನಮಃ । ಮಧ್ಯೇ ಅನುಗ್ರಹಾಯೈ ನಮಃ ॥ ಏತಾಃ ವೀಜಿತಚಾಮರಹಸ್ತಾಃ ತಿಷ್ಠಂತಿ ॥ ತಸ್ಯಾಗ್ರೇ ಸಹಸ್ರಫಣಾಮಂಡಲಮಂಡಿತಾಯ ಕುಂಡಲಾಕೃತಿಸ್ವರೂಪಾಯ ಹರೇರ್ಯೋಗಪೀಠ-ಸ್ವರೂಪಾಯ ಶ್ರೀಮದನಂತಾಯ ನಮಃ ॥ ಪೀಠಪೂಜಾಂ ಸಮರ್ಪಯಾಮಿ ॥ (ಪೀಠಕ್ಕೆ ಮಂತ್ರಾಕ್ಷತೆ ಮತ್ತು ಬಿಡಿಹೂಗಳನ್ನು ಹಾಕಬೇಕು. ಪ್ರತಿಯೊಂದು ನಾಮಗಳ ಆರಂಭದಲ್ಲಿ ಓಂಕಾರವನ್ನು ಸೇರಿಸಿಕೊಳ್ಳಬೇಕು)

## ॥ ಪ್ರಾಣಪ್ರತಿಷ್ಠಾವಿಧಿಃ ॥

ಅಧೋಮುಖಂ ಹೃತ್ಕಮಲಂ ತೋರಣೋದ್ಧರಣಂ ಚರೇತ್ ।
ವಿಕಾಸ್ಯ ಜ್ಞಾನರವಿಣಾ ಕರ್ಣಿಕಾಸ್ಥಂ ಪರಂ ವಿಭುಮ್ ॥

ಹೃದಯಸ್ಥಾ ಹರೇರ್ಮೂರ್ತಿಃ ಜೀವೋ ಯತ್ಪ್ರತಿಬಿಂಬಕಃ ।
ಯದ್ವಶೇ ವರ್ತತೇ ಜೀವಃ ಸಾ ತು ಜೀವಕಲಾ ಸ್ಮೃತಾ ॥

ಜೀವಾಂತರ್ಯಾಮಿತೋ ವಿಷ್ಣುಃ ಆತ್ಮಾ ನಾಮ ಪ್ರಕೀರ್ತಿತಃ ।
ತೇಜಸ್ಸಾರಮಯೀಂ ದಿವ್ಯಾಂ ಪ್ರತಿಮಾಂ ಪ್ರತಿಮಾಗತಾಮ್ ॥

ಧ್ಯಾತ್ವಾ ಪ್ರಾಣಾಧಿಪಂ ತತ್ರ ಪ್ರತಿಮಾರೂಪಿಣಂ ಪ್ರಭುಮ್ ।
ತನ್ಮಧ್ಯೇ ರಮಯಾ ಸಾರ್ಧಮಾಸೀನಂ ಕ್ಷೀರನೀರವತ್ ॥
ಪ್ರತಿಮಾರೂಪಿಣಂ ಸಮ್ಯಗ್ಧ್ಯಾತ್ವೈವಾವಾಹಯೇತ್ಸುಧೀಃ ॥

ಓಂ ॥ ಆತ್ಮಾದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ ।
ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ॥

ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ಶ್ರೀಪುರುಷೋತ್ತಮ ।
ಆವಾಹಯಾಮಿ ಪೀಠೇ ತ್ವಾಂ ಪ್ರತಿಮಾಯಾಂ ಜಗತ್ಪತೇ ।
ಇತಿ ಸಂಪ್ರಾರ್ಥ್ಯ ದೇವೇಶಂ ಷಣ್ಮುದ್ರಾಂಶ್ಚ ಪ್ರದರ್ಶಯೇತ್ ॥

(ಹೃದಯಕಮಲದಲ್ಲಿರುವ ಶ್ರೀಹರಿಯನ್ನು ಶ್ವಾಸಮಾರ್ಗದಿಂದ ಹಸ್ತಗಳಲ್ಲಿರುವ ಪುಷ್ಪಗಳಲ್ಲಿ ಬಂದಿರುವನೆಂದು ಚಿಂತಿಸಿ, ಕಲಶ / ಪ್ರತಿಮೆಗಳ ಮೇಲೆ ಹಾಕಿ ಆವಾಹಿಸಬೇಕು)

ಓಂ ಆವಾಹಿತೋ ಭವ । ಸ್ಥಾಪಿತೋ ಭವ । ಸನ್ನಿಹಿತೋ ಭವ ।
ಅವಕುಂಠಿತೋ ಭವ । ಸುಪ್ರಸನ್ನೋ ಭವ । ವರದೋ ಭವ ॥

ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ಕರೋ ಭವ ।
ವಿಭೋ ಸಕಲಲೋಕೇಶ ದೇವದೇವ ಜಗತ್ಪತೇ ॥

ತ್ವಾಂ ಪೂಜಯಾಮಿ ಸದ್ಭಕ್ತ್ಯಾ ಭೋಗೈರರ್ಘ್ಯಾದಿಭಿಃ ಕ್ರಮಾತ್ ।
ಯಾಗಾವಸಾನಪರ್ಯಂತಂ ಅತ್ರ ಸ್ಥಿತ್ವಾ ಜಗತ್ಪತೇ ॥
ಭಕ್ತಸ್ಯ ಮಮ ಪೂಜಾಂ ಚ ಗೃಹೀತ್ವಾ ಪಾಹಿ ಮಾಂ ಪ್ರಭೋ ॥

**ಅಥ ಧ್ಯಾನಮ್ ।**

ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥

ಓಂ ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।
ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮೋ ನಮಃ ॥51॥
ಧ್ಯಾಯೇತ್ಸತ್ಯಂ ಗುಣಾತೀತಂ ಗುಣತ್ರಯಸಮನ್ವಿತಂ ।
ಲೋಕನಾಥಂ ತ್ರಿಲೋಕೇಶಂ ಕೌಸ್ತುಭಾಭರಣಂ ಹರಿಂ ॥2॥

ನೀಲವರ್ಣಂ ಪೀತವಾಸಂ ಶ್ರೀವತ್ಸಪದಭೂಷಿತಂ ।
ಗೋವಿಂದಂ ಗೋಕುಲಾನಂದಂ ಬ್ರಹ್ಮಾದ್ಯೈರಪಿ ಪೂಜಿತಂ ॥3॥

(ಬೊಗಸೆಯಲ್ಲಿ ಹೂ-ತುಳಸಿಗಳನ್ನು ಹಿಡಿದುಕೊಂಡು ಹೃದಯಕಮಲದಲ್ಲಿರುವ ಪರಮಾತ್ಮನು ಶ್ವಾಸಮಾರ್ಗದಿಂದ ಬೊಗಸೆಯಲ್ಲಿರುವ ಹೂ-ತುಳಸಿಗಳಲ್ಲಿ ಬಂದು ನೆಲೆಸಿರುವನು ಎಂದು ಚಿಂತಿಸಿ,)

**ಆವಾಹನಮ್ ।**

ಓಂ ಸಹಸ್ರಶೀರ್ಷಾ ಪು.... ॥ ಹಿರಣ್ಯವರ್ಣಾಂ ಹರಿಣೀಂ.... ॥

ಆಗಚ್ಛ ದೇವದೇವೇಶ ತೇಜೋರಾಶೇ ಜಗತ್ಪತೇ ।
ಕ್ರಿಯಮಾಣಾಂ ಮಯಾ ಪೂಜಾಂ ಗೃಹಾಣ ಸುರಸತ್ತಮ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ಸಾಂಗಾಯ ಸಪರಿವಾರಾಯ ಸಾಯುಧಾಯ ಸಶಕ್ತಿಕಾಯ ನಮಃ । ಶ್ರೀಲಕ್ಷ್ಮೀಸಹಿತ ಶ್ರೀಸತ್ಯನಾರಾಯಣಂ ಸಾಂಗಂ ಸಪರಿವಾರಂ ಸಾಯುಧಂ ಸಶಕ್ತಿಕಂ ಆವಹಾಯಾಮಿ ॥ ॥1॥
(ಅವನನ್ನು ಕಲಶದಲ್ಲಿ ಆವಾಹನೆ ಮಾಡುತ್ತೇನೆಂದು ಆ ಹೂ-ತುಳಸಿಗಳನ್ನು ಕಲಶದ ಮೇಲೆ ಹಾಕಬೇಕು)

**ಆಸನಮ್ ।**

ಪುರುಷ ಏವೇದಂ... ॥ ತಾಂ ಮ ಆವಹ ಜಾತವೇದೋ... ॥

ನಾನಾರತ್ನಸಮಾಯುಕ್ತಂ ಕಾರ್ತಸ್ವರವಿಭೂಷಿತಂ ।
ಆಸನಂ ದೇವದೇವೇಶ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಆಸನಂ ಸಮರ್ಪಯಾಮಿ ॥
(ಮಂತ್ರಾಕ್ಷತೆಯನ್ನು ಸಮರ್ಪಿಸಬೇಕು)

**ಪಾದ್ಯಮ್ ।**

ಏತಾವಾನಸ್ಯ... ॥ ಅಶ್ವಪೂರ್ವಾಂ... ॥

ಗಂಗಾದಿಸರ್ವತೀರ್ಥೇಭ್ಯೋ ಮಯಾ ಪಾದ್ಯಾರ್ಥಮಾಹೃತಂ ।
ತೋಯಮೇತತ್ ಸುಖಸ್ಪರ್ಶಂ ಪಾದ್ಯಾರ್ಥಂ ಪ್ರತಿಗೃಹ್ಯತಾಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಪಾದಯೋಃ ಪಾದ್ಯಂ ಸಮರ್ಪಯಾಮಿ ॥
(ತಂಬಿಗೆಯ ನೀರನ್ನು ಉದ್ಧರಣೆಯಿಂದ ಎತ್ತಿ ದೇವರ ಪಾದದ ಮೇಲೆ ಸ್ವಲ್ಪ ಹಾಕಿ ಉಳಿದ ನೀರನ್ನು ಅರ್ಘ್ಯಪಾತ್ರೆಗೆ ಹಾಕಿ)

**ಅರ್ಘ್ಯಮ್ ।**

ತ್ರಿಪಾದೂರ್ಧ್ವ... ॥ ಕಾಂಸೋಽಸ್ಮಿ ತಾಂ... ॥

ನಮಸ್ತೇ ದೇವದೇವೇಶ ನಮಸ್ತೇ ಧರಣೀಧರ ।
ನಮಸ್ತೇ ಕಮಲಾಕಾಂತ ಗೃಹಾಣಾರ್ಘ್ಯಂ ನಮೋಽಸ್ತು ತೇ ॥

ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಅರ್ಘ್ಯಂ ಸಮರ್ಪಯಾಮಿ ॥
(ತಂಬಿಗೆಯ ನೀರನ್ನು ಉದ್ಧರಣೆಯಿಂದ ಎತ್ತಿ ದೇವರ ಪಾದದ ಮೇಲೆ ಸ್ವಲ್ಪ ಹಾಕಿ ಉಳಿದ ನೀರನ್ನು ಅರ್ಘ್ಯಪಾತ್ರೆಗೆ ಹಾಕಿ)

**ಆಚಮನಮ್ ।**

ತಸ್ಮಾದ್ವಿರಾಳಜಾಯತ... ॥ ಚಂದ್ರಾಂ ಪ್ರಭಾಸಾಂ... ॥

ಕರ್ಪೂರವಾಸಿತಂ ತೋಯಂ ಮಂದಾಕಿನ್ಯಾಃ ಸಮಾಹೃತಂ ।
ಆಚಮ್ಯ ತಾಂ ಜಗನ್ನಾಥ ಮಯಾ ದತ್ತಂ ಹಿ ಭಕ್ತಿತಃ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಆಚಮನೀಯಂ ಸಮರ್ಪಯಾಮಿ ॥
(ತಂಬಿಗೆಯ ನೀರನ್ನು ಉದ್ಧರಣೆಯಿಂದ ದೇವರ ಮುಂದೆ ತೋರಿಸಿ ಅರ್ಘ್ಯಪಾತ್ರೆಗೆ ಬಿಡಿ)

**ಮಧುಪರ್ಕಃ ।**

ದಧಿಮಧ್ವಾಜ್ಯ ಸಂಯುಕ್ತಂ ಮಧುಪರ್ಕಂ ಮಯಾಽಽಹೃತಮ್ ।
ಗೃಹಾಣ ಸರ್ವಲೋಕೇಶ ಸತ್ಯದೇವ ನಮೋಽಸ್ತು ತೇ ॥
ಶ್ರೀಲಕ್ಷ್ಮೀಸಹಿತ ಶ್ರೀಸತ್ಯನಾರಾಯಣಾಯ ನಮಃ ಮಧುಪರ್ಕಂ ಸಮರ್ಪಯಾಮಿ ॥
(ಮೊಸರು, ತುಪ್ಪ, ಜೇನುತುಪ್ಪ, ಇವುಗಳಲ್ಲಿ ಬಿಡಿಹೂವನ್ನು ಅದ್ದಿ ದೇವರಿಗೆ ಸಮರ್ಪಿಸಬೇಕು)
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಪುನರಾಚಮನೀಯಂ ಸಮರ್ಪಯಾಮಿ ॥

**ಸ್ನಾನಮ್ ।**

ಯತ್ಪುರುಷೇಣ... ॥ ಆದಿತ್ಯವರ್ಣೇ... ॥

ಗಂಗಾ ಚ ಯಮುನಾ ಚೈವ ನರ್ಮದಾ ಚ ಸರಸ್ವತೀ ।
ತಾಪೀ ಪಯೋಷ್ಣೀ ರೇವಾ ಚ ತಾಭ್ಯಃ ಸ್ನಾನಾರ್ಥಮಾಹೃತಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಸ್ನಾನಂ ಸಮರ್ಪಯಾಮಿ ॥
(ಮೀಸಲು ನೀರನ್ನು ಬಿಡಿಹೂವಿನಲ್ಲಿ ಅದ್ದಿ ದೇವರ ಮೇಲೆ ಪ್ರೋಕ್ಷಿಸಬೇಕು)

**ಪಂಚಾಮೃತಸ್ನಾನಮ್ ।**

(ಬೆಳ್ಳಿ ತಟ್ಟೆಯಲ್ಲಿ ಶ್ರೀಲಕ್ಷ್ಮೀನಾರಾಯಣರ ಪ್ರತಿಮೆಯನ್ನಿಟ್ಟುಕೊಂಡು ಕ್ರಮವಾಗಿ ಮಂತ್ರಗಳನ್ನು ಹೇಳುತ್ತಾ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಹಣ್ಣು ಇವುಗಳಿಂದ ಪಂಚಾಮೃತಾಭಿಷೇಕವನ್ನು ಮಾಡಬೇಕು)

ಓಂ ಆಪ್ಯಾಯ ಸ್ವ ಸಮೇತು ತೇ ವಿಶ್ವತಃ ಸೋಮವೃಷ್ಣ್ಯಂ ।
ಭವಾ ವಾಜಸ್ಯ ಸಂಗಥೇ ॥

ಸುರಭೇಸ್ತು ಸಮುತ್ಪನ್ನಂ ದೇವಾನಾಮಪಿ ದುರ್ಲಭಂ ।
ಪಯೋ ದದಾಮಿ ದೇವೇಶ ಸ್ನಾನಾರ್ಥಂ ಪ್ರತಿಗೃಹ್ಯತಾಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । **ಪಯಃಸ್ನಾನಂ** ಸಮರ್ಪಯಾಮಿ ॥

ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋ ರಶ್ವಸ್ಯ ವಾಜಿನಃ ।
ಸುರಭಿ ನೋ ಮುಖಾಕರತ್ಪ್ರಣ ಆಯೂಂಷಿ ತಾರಿಷತ್ ॥

ಚಂದ್ರಮಂಡಲಸಂಕಾಶಂ ಸರ್ವದೇವಪ್ರಿಯಂ ಹಿ ಯತ್ ।
ದಧಿ ದದಾಮಿ ದೇವೇಶ ಸ್ನಾನಾರ್ಥಂ ಪ್ರತಿಗೃಹ್ಯತಾಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । **ದಧಿಸ್ನಾನಂ** ಸಮರ್ಪಯಾಮಿ ॥

ಓಂ ಘೃತಂಮಿಮಿಕ್ಷೇ ಘೃತಮಸ್ಯ ಯೋನಿರ್ಘೃತೇ ಶ್ರಿತೋ ಘೃತಮ್ವಸ್ಯಧಾಮ ।
ಅನುಷ್ವಧಮಾವಹಮಾದಯಸ್ವ ಸ್ವಾಹಾಕೃತಂವೃಷಭವಕ್ಷಿಹವ್ಯಂ ॥

ಆಜ್ಯಂ ಸುರಾಣಾಮಾಹಾರಮಾಜ್ಯಂ ಯಜ್ಞೇ ಪ್ರತಿಷ್ಠಿತಂ ।
ಆಜ್ಯಂ ಪವಿತ್ರಂ ಪರಮಂ ಸ್ನಾನಾರ್ಥಂ ಪ್ರತಿಗೃಹ್ಯತಾಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । **ಘೃತಸ್ನಾನಂ** ಸಮರ್ಪಯಾಮಿ ॥

ಓಂ ಮಧುವಾತಾ ಋತಾಯತೇ ಮಧುಕ್ಷರಂತಿ ಸಿಂಧವಃ ।
ಮಾಧ್ವೀರ್ನಃ ಸಂತ್ವೋಷಧೀಃ ॥

ಮಧುನಕ್ತ ಮುತೋಷಸೋ ಮಧುಮತ್ ಪಾರ್ಥಿವಂ ರಜಃ ।
ಮಧುದ್ಯೌರಸ್ತು ನಃ ಪಿತಾ ॥

ಮಧುಮಾನ್ನೋವನಸ್ಪತಿರ್ಮಧುಮಾಂ ಅಸ್ತು ಸೂರ್ಯಃ ।
ಮಾಧ್ವೀರ್ಗಾವೋ ಭವಂತು ನಃ ॥

ಸರ್ವೌಷಧಿ ಸಮುತ್ಪನ್ನಂ ಪೀಯೂಷಸದೃಶಂ ಮಧು ।
ಸ್ನಾನಾರ್ಥಂ ತೇ ಮಯಾ ದತ್ತಂ ಗೃಹಾಣ ಪರಮೇಶ್ವರ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । **ಮಧುಸ್ನಾನಂ** ಸಮರ್ಪಯಾಮಿ ॥

ಓಂ ಸ್ವಾದುಃಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತು ನಾಮ್ನೇ ।
ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾಂ ಅದಾಭ್ಯಃ ॥

ಇಕ್ಷುದಂಡಾತ್ ಸಮುತ್ಪನ್ನಾ ರಸ್ಯಾ ಸ್ನಿಗ್ಧತರಾ ಶುಭಾ ।
ಶರ್ಕರೇಯಂ ಮಯಾ ದತ್ತಾ ಸ್ನಾನಾರ್ಥಂ ಪ್ರತಿಗೃಹ್ಯತಾಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । **ಶರ್ಕರಾಸ್ನಾನಂ** ಸಮರ್ಪಯಾಮಿ ॥

ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾಯಾಶ್ಚ ಪುಷ್ಪಿಣೀಃ ।
ಬೃಹಸ್ಪತಿಪ್ರಸೂತಾಸ್ತಾನೋ ಮುಂಚಂತ್ವಂ ಹಸಃ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । **ಫಲಸ್ನಾನಂ ಸಮರ್ಪಯಾಮಿ** ॥

ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಂ ।
ಈಶ್ವರೀಂ ಸರ್ವಭೂತಾನಾಂ ತಾಮಿಹೋಪಹ್ವಯೇ ಶ್ರಿಯಂ ॥

ಹರಿಚಂದನಸಂಭೂತಂ ಹರಿಪ್ರೀತೇಶ್ಚ ಗೌರವಾತ್ ।
ಸುರಭಿಪ್ರಿಯ ಗೋವಿಂದ ಗಂಧಂ ಸ್ನಾನಾಯ ಗೃಹ್ಯತಾಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । **ಗಂಧೋದಕ ಸ್ನಾನಂ ಸಮರ್ಪಯಾಮಿ** ॥

ಅಂಗೋದ್ವರ್ತನಕಂ ದೇವ ಕಸ್ತೂರ್ಯಾದಿವಿಮಿಶ್ರಿತಂ ।
ಲೇಪನಾರ್ಥಂ ಗೃಹಾಣೇದಂ ಹರಿದ್ರಾಕುಂಕುಮೈರ್ಯುತಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । **ಅಂಗೋದ್ವರ್ತನಂ ಸಮರ್ಪಯಾಮಿ** ॥

**ಶುದ್ಧೋದಕಸ್ನಾನಮ್ ।**

ನಾನಾತೀರ್ಥಾದಾಹೃತಂ ಚ ತೋಯಮುಷ್ಣಂ ಮಯಾ ಕೃತಂ ।
ಸ್ನಾನಾರ್ಥಂ ತೇ ಪ್ರಯಚ್ಛಾಮಿ ಸ್ವೀಕುರುಷ್ವ ದಯಾನಿಧೇ ॥
ಓಂ ಆಪೋ ಹಿಷ್ಠಾ ಮಯೋ........ಜನಯಥಾ ಚ ನಃ ।
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । **ಶುದ್ಧೋದಕಸ್ನಾನಂ ಸಮರ್ಪಯಾಮಿ** ॥
(ಮೀಸಲು ನೀರನ್ನು ದೇವರಿಗೆ ತೋರಿಸಿ, ಅರ್ಘ್ಯಪಾತ್ರೆಗೆ ಬಿಡಬೇಕು)

**ಅಥ ಮಹಾಭಿಷೇಕಃ ।**

ಹರಿಃ ಓಂ ಸಹಸ್ರಶೀರ್ಷಾ.... ॥ ಹಿರಣ್ಯವರ್ಣಾಂ ಹರಿಣೀಂ.... ॥ ಅತೋ ದೇವಾ ಅವಂತು ನೋ.... ॥ ಶ್ರೀಸತ್ಯನಾರಾಯಣಾಯ ನಮಃ । ಮಹಾಭಿಷೇಕಂ ಸಮರ್ಪಯಾಮಿ ॥ ಸ್ನಾನಂತರಂ ಆಚಮನೀಯಂ ಸಮರ್ಪಯಾಮಿ ॥

**ವಸ್ತ್ರಮ್ ।**

ತಂ ಯಜ್ಞಂ... ॥ ಉಪೈತು ಮಾಂ.... ॥

ತಪ್ತಕಾಂಚನವರ್ಣಾಭೇ ಅನರ್ಘ್ಯೇ ಮೃದುಲೇ ಶುಭೇ ।
ಪಾಹಿ ಮಾಂ ಪುಂಡರೀಕಾಕ್ಷ ವಾಸಸೀ ಪ್ರತಿಗೃಹ್ಯತಾಂ ॥

ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ವಸ್ತ್ರಯುಗ್ಮಂ ಸಮರ್ಪಯಾಮಿ ॥
(ದೇವರಿಗೆ ಗೆಜ್ಜೆವಸ್ತ್ರವನ್ನು ಸಮರ್ಪಿಸಬೇಕು)

**ಕಂಚುಕಮ್ ।**

ನವರತ್ನಾದಿಭಿರ್ಬದ್ಧಾಂ ಸುವರ್ಣೈಶ್ಚೈವ ತಂತುಭಿಃ ।
ನಿರ್ಮಿತಾಂ ಕಂಚುಕೀಂ ಭಕ್ತ್ಯಾ ಗೃಹಾಣ ಪರಮೇಶ್ವರಿ ॥
ಶ್ರೀಮಹಾಲಕ್ಷ್ಮ್ಯೈ ನಮಃ । ಕಂಚುಕೀಂ ಸಮರ್ಪಯಾಮಿ ॥
(ಲಕ್ಷ್ಮೀದೇವಿಗೆ ಮಂತ್ರಾಕ್ಷತೆಯನ್ನು ಸಮರ್ಪಿಸಿ)

**ಮಂಗಲಸೂತ್ರಮ್ ।**

ಮಾಂಗಲ್ಯತಂತುಮಣಿಭಿಃ ಮೌಕ್ತಿಕೈಶ್ಚ ವಿರಾಜಿತಂ ।
ಸೌಮಂಗಲ್ಯಾಭಿವೃದ್ಧ್ಯರ್ಥಂ ಕಂಠಸೂತ್ರಂ ದದಾಮಿ ತೇ ॥
ಶ್ರೀಮಹಾಲಕ್ಷ್ಮ್ಯೈ ನಮಃ । ಕಂಠಸೂತ್ರಂ ಸಮರ್ಪಯಾಮಿ ॥
(ಲಕ್ಷ್ಮೀದೇವಿಗೆ ಮಂಗಲಸೂತ್ರವನ್ನು ಸಮರ್ಪಿಸಿ)

**ತಾಡಪತ್ರಮ್ ।**

ತಾಡಪತ್ರಾಣಿ ದಿವ್ಯಾನಿ ವಿಚಿತ್ರಾಣಿ ಶುಭಾನಿ ಚ ।
ಕರಾಭರಣಯುಕ್ತಾನಿ ಮಾತಸ್ತ್ವತ್ಪ್ರತಿಗೃಹ್ಯತಾಂ ॥
ಶ್ರೀಮಹಾಲಕ್ಷ್ಮ್ಯೈ ನಮಃ । ತಾಡಪತ್ರಂ ಸಮರ್ಪಯಾಮಿ ॥
(ಲಕ್ಷ್ಮೀದೇವಿಗೆ ಮಂತ್ರಾಕ್ಷತೆಯನ್ನು ಸಮರ್ಪಿಸಿ)

**ಹರಿದ್ರಾ ।**

ಹರಿದ್ರಾರಂಜಿತೇ ದೇವಿ ಸುಖಸೌಭಾಗ್ಯದಾಯಿನಿ ।
ಹರಿದ್ರಾಂ ತೇ ಪ್ರದಾಸ್ಯಾಮಿ ಗೃಹಾಣ ಪರಮೇಶ್ವರಿ ॥
ಶ್ರೀಮಹಾಲಕ್ಷ್ಮ್ಯೈ ನಮಃ । ಹರಿದ್ರಾಂ ಸಮರ್ಪಯಾಮಿ ॥
(ಲಕ್ಷ್ಮೀದೇವಿಗೆ ಅರಿಷಿಣವನ್ನು ಸಮರ್ಪಿಸಿ)

**ಕುಂಕುಮಮ್ ।**

ಕುಂಕುಮಂ ಕಾಮದಂ ದಿವ್ಯಂ ಕಾಮಿನೀ ಕಾಮಸಂಭವಂ ।
ಕುಂಕುಮೇನಾರ್ಚಿತೇ ದೇವಿ ಸೌಭಾಗ್ಯಂ ದೇಹಿ ಗೃಹ್ಯತಾಂ ॥
ಶ್ರೀಮಹಾಲಕ್ಷ್ಮ್ಯೈ ನಮಃ । ಕುಂಕುಮಂ ಸಮರ್ಪಯಾಮಿ ॥
(ಲಕ್ಷ್ಮೀದೇವಿಗೆ ಕುಂಕುಮವನ್ನು ಸಮರ್ಪಿಸಿ)

**ಕಜ್ಜಲಮ್ ।**

ಸುನೀಲಭ್ರಮರಾಭಾಸಂ ಕಜ್ಜಲಂ ನೇತ್ರಮಂಡನಂ ।
ಮಯಾ ದತ್ತಮಿದಂ ಭಕ್ತ್ಯಾ ಕಜ್ಜಲಂ ಪ್ರತಿಗೃಹ್ಯತಾಂ ॥
ಶ್ರೀಮಹಾಲಕ್ಷ್ಮ್ಯೈ ನಮಃ । ಕಜ್ಜಲಂ ಸಮರ್ಪಯಾಮಿ ॥
(ಲಕ್ಷ್ಮೀದೇವಿಗೆ ಕಾಡಿಗೆಯನ್ನು ಸಮರ್ಪಿಸಿ)

**ಸಿಂಧೂರಮ್ ।**

ವಿದ್ಯುತ್ಕೃಶಾನುಸಂಕಾಶಂ ಜಪಾಕುಸುಮಸನ್ನಿಭಂ ।
ಸಿಂಧೂರಂ ತೇ ಪ್ರದಾಸ್ಯಾಮಿ ಸೌಭಾಗ್ಯಂ ದೇಹಿ ಮೇ ಚಿರಂ ॥
ಶ್ರೀಮಹಾಲಕ್ಷ್ಮ್ಯೈ ನಮಃ । ಸಿಂಧೂರಂ ಸಮರ್ಪಯಾಮಿ ॥
(ಲಕ್ಷ್ಮೀದೇವಿಗೆ ಸಿಂಧೂರವನ್ನು ಸಮರ್ಪಿಸಿ)

**ಆಭರಣಮ್ ।**

ಸ್ವಭಾವಸುಂದರಾಂಗಿ ತ್ವಂ ನಾನಾರತ್ನಯುತಾನಿ ಚ ।
ಭೂಷಣಾನಿ ವಿಚಿತ್ರಾಣಿ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ ॥
ಶ್ರೀಮಹಾಲಕ್ಷ್ಮ್ಯೈ ನಮಃ । ನಾನಾಭರಣಾನಿ ಸಮರ್ಪಯಾಮಿ ॥
(ಲಕ್ಷ್ಮೀದೇವಿಗೆ ಆಭರಣಗಳನ್ನು ಸಮರ್ಪಿಸಿ)

**ಪರಿಮಳದ್ರವ್ಯಾಣಿ ।**

ನಾನಾಸುಗಂಧಿಕಂ ದ್ರವ್ಯಂ ಚೂರ್ಣೀಕೃತ್ಯ ಪ್ರಯತ್ನತಃ ।
ದದಾಮಿ ತೇ ನಮಸ್ತುಭ್ಯಂ ಪ್ರೀತ್ಯರ್ಥಂ ಪ್ರತಿಗೃಹ್ಯತಾಂ
ಶ್ರೀಮಹಾಲಕ್ಷ್ಮ್ಯೈ ನಮಃ । ನಾನಾಪರಿಮಳದ್ರವ್ಯಂ ಸಮರ್ಪಯಾಮಿ ॥
(ಲಕ್ಷ್ಮೀದೇವಿಗೆ ಪರಿಮಳದ್ರವ್ಯಗಳನ್ನು ಸಮರ್ಪಿಸಿ)

**ಯಜ್ಞೋಪವೀತಮ್ ।**

ತಸ್ಮಾದ್ಯಜ್ಞಾತ್ ಸರ್ವಹುತಃ ಸಂಭೃತಂ... ॥ ಕ್ಷುತ್ಪಿಪಾಸಾ.... ॥
ಬ್ರಹ್ಮವಿಷ್ಣುಮಹೇಶೈಶ್ಚ ನಿರ್ಮಿತಂ ಬ್ರಹ್ಮಸೂತ್ರಕಂ ।
ಯಜ್ಞೋಪವೀತದಾನೇನ ಪ್ರೀಯತಾಂ ಕಮಲಾಪತಿಃ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಯಜ್ಞೋಪವೀತಂ ಸಮರ್ಪಯಾಮಿ ॥
(ದೇವರಿಗೆ ಯಜ್ಞೋಪವೀತವನ್ನು ಸಮರ್ಪಿಸಿರಿ)

**ಗಂಧಃ ।**

ತಸ್ಮಾದ್ಯಜ್ಞಾತ್ ಸರ್ವಹುತ ಋಚಃ.... ॥ ಗಂಧದ್ವಾರಾಂ ದುರಾ.... ॥
ಗೋರೋಚನಂ ಚಂದನದೇವದಾರುಕರ್ಪೂರಕೃಷ್ಣಾಗ್ಗರುನಾಗರಾಣಿ ।
ಕಸ್ತೂರಿಕಾ ಕೇಸರಮಿಶ್ರಿತಾನಿ ಯಥೋಚಿತಂ ಸತ್ಯ ಮಯಾಽರ್ಪಿತಾನಿ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಗಂಧಂ ಸಮರ್ಪಯಾಮಿ ॥
(ದೇವರಿಗೆ ಗಂಧವನ್ನು ಸಮರ್ಪಿಸಬೇಕು)

**ಅಕ್ಷತಾಃ ।**

ತಸ್ಮಾದಶ್ವಾ ಅಜಾಯಂತ... ॥ ಮನಸಃಕಾಮಮಾಕೂತಿಂ... ॥

ಶ್ವೇತತಂಡುಲಸಂಯುಕ್ತಾನ್ ಕುಂಕುಮೇನ ವಿರಾಜಿತಾನ್ ।
ಅಕ್ಷತಾನ್ ಗೃಹ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಅಕ್ಷತಾನ್ ಸಮರ್ಪಯಾಮಿ ॥
(ದೇವರಿಗೆ ಮಂತ್ರಾಕ್ಷತೆಯನ್ನು ಸಮರ್ಪಿಸಬೇಕು)

**ಪುಷ್ಪಾಣಿ ।**

ಸೇವಂತಿಕಾಬಕುಲಚಂಪಕಪಾಟಲಾಬ್ಜೈಃ
ಪುನ್ನಾಗಜಾತಿಕರವೀರರಸಾಲಪುಷ್ಪೈಃ ।
ಬಿಲ್ವಪ್ರವಾಲತುಲಸೀದಲಮಾಲತೀಭಿಃ
ತ್ವಾಂ ಪೂಜಯಾಮಿ ಜಗದೀಶ್ವರ ಮೇ ಪ್ರಸೀದ ॥

ಮಾಲ್ಯಾದೀನಿ ಸುಗಂಧೀನಿ ಮಾಲತ್ಯಾದೀನಿ ವೈ ಪ್ರಭೋ ।
ಮಯಾ ಹೃತಾನಿ ಪೂಜಾರ್ಥಂ ಪುಷ್ಪಾಣಿ ಪ್ರತಿಗೃಹ್ಯತಾಂ ॥

ಜಾತೀಪುಷ್ಪಂ ಚ ಕಲ್ಹಾರಂ ಕಮಲಂ ಕರವೀರಕಂ ।
ಕೇತಕಂ ಬಕುಲಂ ಚೈವ ನಾರಾಯಣ ದದಾಮ್ಯಹಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಪುಷ್ಪಾಣಿ ಸಮರ್ಪಯಾಮಿ ॥
(ದೇವರಿಗೆ ಪುಷ್ಪಗಳನ್ನು ಸಮರ್ಪಿಸಬೇಕು)

**ವೈಜಯಂತೀಮಾಲಾ ।**

ತುಲಸೀ ಕುಂದಮಂದಾರ ಪಾರಿಜಾತಾಂಬುಜೈಸ್ತಥಾ ।
ಪಂಚಭಿರ್ಗ್ರಥಿತಾ ಮಾಲಾ ವೈಜಯಂತೀತಿ ಕಥ್ಯತೇ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ವೈಜಯಂತೀಮಾಲಾಂ ಸಮರ್ಪಯಾಮಿ ॥
(ದೇವರಿಗೆ ವೈಜಯಂತೀಮಾಲೆಯನ್ನು ಸಮರ್ಪಿಸಬೇಕು)

**ಅಲಂಕಾರಮ್ ।**

ಕಟಿಸೂತ್ರಾಂಗುಲಿಂ ಚೈವ ಕುಂಡಲೇ ಮುಕುಟಂ ತಥಾ ।
ವನಮಾಲಾಂ ಕೌಸ್ತುಭಂ ಚ ಗೃಹಾಣ ಪುರುಷೋತ್ತಮ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ನಾನಾಲಂಕಾರಾನ್ ಸಮರ್ಪಯಾಮಿ ॥

॥ ಶ್ರೀವಿಷ್ಣುಸಹಸ್ರನಾಮಭಿಃ ಸಹಸ್ರತುಲಸ್ಯರ್ಪಣಂ ॥

**ಆವರಣಪೂಜಾ ।**

ಪೀಠಮಧ್ಯೇ ಪರದೇವತಾಯೈ ಶ್ರೀಲಕ್ಷ್ಮೀನಾರಾಯಣಾಯ ನಮಃ ॥

1) ದೇವಸ್ಯ ವಾಮಪಾರ್ಶ್ವಸ್ಥಿತಾಯೈ ಸುವರ್ಣವರ್ಣಾಯೈ ದುಕೂಲವಸನಾಯೈ ಪದ್ಮಹಸ್ತಾಯೈ ವಿಚಿತ್ರಾಭರಣಭೂಷಿತಾಯೈ ತನ್ಮುಖನ್ಯಸ್ತಲೋಚನಾಯೈ ಲಂ ಲಕ್ಷ್ಮ್ಯೈ ನಮಃ ॥

ದೇವಸ್ಯ ದಕ್ಷಿಣಪಾರ್ಶ್ವಸ್ಥಿತಾಯೈ ದೂರ್ವಾದಳಶ್ಯಾಮಲಾಯೈ ಪೀತಾಂಬರ-ವಸನಾಯೈ ಕುಮುದಹಸ್ತಾಯೈ ತನ್ಮುಖನ್ಯಸ್ತಲೋಚನಾಯೈ ಧಂ ಧರಾಯೈ ನಮಃ ॥

2) ಪೂರ್ವಾದಿದಿಕ್ಷು - ಕೃದ್ಧೋಲ್ಕಾಯ ನಮಃ । ಮಹೋಲ್ಕಾಯ ನಮಃ । ವೀರೋಲ್ಕಾಯ ನಮಃ । ದ್ಯುಲ್ಕಾಯ ನಮಃ । ಸಹಸ್ರೋಲ್ಕಾಯ ನಮಃ ॥ (ಇತಿ ಪ್ರಥಮಾವರಣಮ್)

3) ಆಗ್ನೇಯಾದಿವಿದಿಕ್ಷು - ವಾಸುದೇವಾಯ ನಮಃ, ಮಾಯಾಯೈ ನಮಃ । ಸಂಕರ್ಷಣಾಯ ನಮಃ, ಜಯಾಯೈ ನಮಃ । ಪ್ರದ್ಯುಮ್ನಾಯ ನಮಃ, ಕೃತ್ಯೈ ನಮಃ । ಅನಿರುದ್ಧಾಯ ನಮಃ, ಶಾಂತ್ಯೈ ನಮಃ ॥ (ಇತಿ ದ್ವಿತೀಯಾವರಣಮ್)

4) ಕೇಶವಾಯ ನಮಃ, ನಾರಾಯಣಾಯ ನಮಃ, ಮಾಧವಾಯ ನಮಃ, ಗೋವಿಂದಾಯ ನಮಃ, ವಿಷ್ಣವೇ ನಮಃ, ಮಧುಸೂದನಾಯ ನಮಃ, ತ್ರಿವಿಕ್ರಮಾಯ ನಮಃ, ವಾಮನಾಯ ನಮಃ, ಶ್ರೀಧರಾಯ ನಮಃ, ಹೃಷೀಕೇಶಾಯ ನಮಃ, ಪದ್ಮನಾಭಾಯ ನಮಃ, ದಾಮೋದರಾಯ ನಮಃ ॥ (ಇತಿ ತೃತೀಯಾವರಣಮ್)

ಸಂಕರ್ಷಣಾಯ ನಮಃ, ವಾಸುದೇವಾಯ ನಮಃ, ಪ್ರದ್ಯುಮ್ನಾಯ ನಮಃ, ಅನಿರುದ್ಧಾಯ ನಮಃ, ಪುರುಷೋತ್ತಮಾಯ ನಮಃ, ಅಧೋಕ್ಷಜಾಯ ನಮಃ, ನಾರಸಿಂಹಾಯ ನಮಃ, ಅಚ್ಯುತಾಯ ನಮಃ, ಜನಾರ್ದನಾಯ ನಮಃ, ಉಪೇಂದ್ರಾಯ ನಮಃ, ಹರಯೇ ನಮಃ, ಶ್ರೀಕೃಷ್ಣಾಯ ನಮಃ ॥ (ಇತಿ ಚತುರ್ಥಾವರಣಮ್)

5) ಮತ್ಸ್ಯಾಯ ನಮಃ, ಕೂರ್ಮಾಯ ನಮಃ, ವರಾಹಾಯ ನಮಃ, ನಾರಸಿಂಹಾಯ ನಮಃ, ವಾಮನಾಯ ನಮಃ, ಭಾರ್ಗವಾಯ ನಮಃ, ರಾಮಾಯ ನಮಃ, ಕೃಷ್ಣಾಯ ನಮಃ, ಬುದ್ಧಾಯ ನಮಃ, ಕಲ್ಕಿನೇ ನಮಃ, ಅನಂತಾಯ ನಮಃ, ವಿಶ್ವರೂಪಾಯ ನಮಃ ॥ (ಇತಿ ಪಂಚಮಾವರಣಮ್)

6) ಅನಂತಾಯ ನಮಃ, ವಾರುಣ್ಯೈ ನಮಃ, ಬ್ರಹ್ಮಣೇ ನಮಃ, ಸರಸ್ವತ್ಯೈ ನಮಃ । ವಾಯವೇ ನಮಃ, ಭಾರತ್ಯೈ ನಮಃ । ಈಶಾನಾಯ ನಮಃ, ಗಿರಿಜಾಯೈ

ನಮಃ । ದೇವಸ್ಯಾಗ್ರೇ ಗರುಡಾಯ ನಮಃ, ವಾಮಭಾಗೇ ಸೌಪರ್ಣ್ಯೈ ನಮಃ ॥
(ಇತಿ ಷಷ್ಠಾವರಣಮ್)

7) ಇಂದ್ರಾಯ ಸುರಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ಅಗ್ನಯೇ ತೇಜೋಽಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ಯಮಾಯ ಧರ್ಮಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ನಿರ್ಋತಯೇ ರಕ್ಷೋಽಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ವರುಣಾಯ ಜಲಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ಕುಬೇರಾಯ ಧನಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ ।
ಈಶಾನಾಯ ಭೂತಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ । ಅಧಃ ॥
ಶೇಷಾಯ ನಾಗಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ । ಊರ್ಧ್ವಮ್ ॥
ಬ್ರಹ್ಮಣೇ ಸತ್ಯಲೋಕಾಧಿಪತಯೇ ಸಭಾರ್ಯಾಯ ಸಪರಿಗ್ರಹಾಯ ಶ್ರೀವಿಷ್ಣುಪಾರ್ಷದಾಯ ನಮಃ । ತನ್ಮಧ್ಯೇ ॥
ಇತಿ ಆವರಣಪೂಜಾಂ ಸಮರ್ಪಯಾಮಿ ॥

(ಆವರಣಪೂಜಾಂಗವಾಗಿ ದೇವರ ಪಾದಗಳಲ್ಲಿ ಪುಷ್ಪಗಳನ್ನು ಪ್ರತಿಯೊಂದು ಆವರಣಕ್ಕೂ ಹಾಕಬೇಕು. ಪ್ರತಿಯೊಂದು ನಾಮಗಳ ಆರಂಭದಲ್ಲಿ ಓಂಕಾರವನ್ನು ಸೇರಿಸಿಕೊಳ್ಳಬೇಕು)

ಅಥ ಅಂಗಪೂಜಾ ।

ಓಂ ಶ್ರೀಸತ್ಯಪರಬ್ರಹ್ಮಣೇ ನಮಃ, ಪಾದೌ (ಕಾಲುಗಳು) ಪೂಜಯಾಮಿ ॥
ಓಂ ಶ್ರೀಸಂಕರ್ಷಣಾಯ ನಮಃ, ಗುಲ್ಫೌ (ಕಾಲಿನ ಗಂಟು) ಪೂಜಯಾಮಿ ॥
ಓಂ ಶ್ರೀಕಾಲಾತ್ಮನೇ ನಮಃ, ಜಾನುನೀ (ಮಂಡಿ) ಪೂಜಯಾಮಿ ॥
ಓಂ ಶ್ರೀವಿಶ್ವರೂಪಾಯ ನಮಃ, ಜಂಘೇ (ಮೊಣಕಾಲು) ಪೂಜಯಾಮಿ ॥
ಓಂ ಶ್ರೀವಿಶ್ವಾಯ ನಮಃ, ಕಟಿಂ (ಸೊಂಟ) ಪೂಜಯಾಮಿ ॥

ಓಂ ಶ್ರೀಪದ್ಮನಾಭಾಯ ನಮಃ, ನಾಭಿಂ (ಹೊಕ್ಕಳು) ಪೂಜಯಾಮಿ ॥
ಓಂ ಶ್ರೀಪರಮಾತ್ಮನೇ ನಮಃ, ಹೃದಯಂ (ಎದೆ) ಪೂಜಯಾಮಿ ॥
ಓಂ ಶ್ರೀವೈಕುಂಠಾಯ ನಮಃ, ಕಂಠಂ (ಕುತ್ತಿಗೆ) ಪೂಜಯಾಮಿ ॥
ಓಂ ಶ್ರೀಸರ್ವಾಸ್ತ್ರಧಾರಿಣೇ ನಮಃ, ಬಾಹೂನ್ (ಭುಜ) ಪೂಜಯಾಮಿ ॥
ಓಂ ಶ್ರೀವಾಚಸ್ಪತಯೇ ನಮಃ, ಮುಖಂ (ಮುಖ) ಪೂಜಯಾಮಿ ॥
ಓಂ ಶ್ರೀಹರಯೇ ನಮಃ, ಜಿಹ್ವಾಂ (ನಾಲಿಗೆ) ಪೂಜಯಾಮಿ ॥
ಓಂ ಶ್ರೀದಾಮೋದರಾಯ ನಮಃ, ದಂತಾನ್ (ಹಲ್ಲುಗಳು) ಪೂಜಯಾಮಿ ॥
ಓಂ ಶ್ರೀಸಹಸ್ರಾಕ್ಷಾಯ ನಮಃ, ನೇತ್ರೇ (ಕಣ್ಣುಗಳು) ಪೂಜಯಾಮಿ ॥
ಓಂ ಶ್ರೀಕೇಶವಾಯ ನಮಃ, ಲಲಾಟಂ (ಹಣೆ) ಪೂಜಯಾಮಿ ॥
ಓಂ ಶ್ರೀಸರ್ವಾತ್ಮನೇ ನಮಃ, ಶಿರಃ (ತಲೆ) ಪೂಜಯಾಮಿ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಸರ್ವಾಂಗಾನಿ (ಎಲ್ಲ ಅಂಗಗಳು) ಪೂಜಯಾಮಿ ॥

**ಧೂಪಃ ।**

ಓಂ ಯತ್ಪುರುಷಂ.... ॥ ಕರ್ದಮೇನ.... ॥

ವನಸ್ಪತಿರಸೋದ್ಭೂತೋ ಗಂಧಾಢ್ಯೋ ಗಂಧ ಉತ್ತಮಃ ।
ಆಘ್ರೇಯಃ ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಧೂಪಮಾಘ್ರಾಪಯಾಮಿ ॥
(ಧೂಪಾರತಿ ತಟ್ಟೆಯಲ್ಲಿ ಎರಡು ಕೆಂಡಗಳನ್ನಿಟ್ಟು ದಶಾಂಗ ಹಾಕಿ, ಆರತಿಯನ್ನು ಮಾಡಬೇಕು)

**ದೀಪಮ್ ।**

ಬ್ರಾಹ್ಮಣೋಸ್ಯ.... ॥ ಆಪಃ ಸೃಜಂತು.... ॥

ಭಕ್ತ್ಯಾ ದೀಪಂ ಪ್ರಯಚ್ಛಾಮಿ ದೇವಾಯ ಪರಮಾತ್ಮನೇ ।
ತ್ರಾಹಿ ಮಾಂ ನರಕಾತ್ ಘೋರಾತ್ ದಿವ್ಯಜ್ಯೋತಿರ್ನಮೋಽಸ್ತು ತೇ ॥
ಶ್ರೀಲಕ್ಷ್ಮೀಸಹಿತ ಶ್ರೀಸತ್ಯನಾರಾಯಣಾಯ ನಮಃ । ದೀಪಂ ಪ್ರದರ್ಶಯಾಮಿ ॥
(ಹಲಗಾರತಿಯಲ್ಲಿ 3 ಬತ್ತಿಯನ್ನಿಟ್ಟುಕೊಂಡು ಏಕಾರತಿಯನ್ನು ಮಾಡಿ ಶಮನಗೊಳಿಸಿ)

**ನೈವೇದ್ಯಮ್ ।**

ಚಂದ್ರಮಾಮನಸೋ.... ॥ ಆರ್ದ್ರಾಂ ಯಃಕರಿಣೀಂ.... ॥

ರಂಭಾಫಲಂ ಘೃತಂ ಕ್ಷೀರಂ ಗೋಧೂಮಸ್ಯ ಚ ಚೂರ್ಣಕಂ ।
ಶರ್ಕರಾಯುಕ್ತನೈವೇದ್ಯಂ ಸಪಾದಂ ಭಕ್ಷ್ಯಮುತ್ತಮಮ್ ॥

ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ನೈವೇದ್ಯಂ ಸಮರ್ಪಯಾಮಿ ॥
(ಶ್ರೀಸತ್ಯನಾರಾಯಣಪ್ರಸಾದವನ್ನು ನಿವೇದಿಸುವಾಗ ಈ ಶ್ಲೋಕವನ್ನು ಹೇಳಬೇಕು)
ಮಧ್ಯೇ ಪಾನೀಯಂ ಸಮರ್ಪಯಾಮಿ ॥ ಉತ್ತರಾಪೋಶನಂ ಸಮರ್ಪಯಾಮಿ ॥
ಹಸ್ತಪ್ರಕ್ಷಾಲನಂ ಸಮರ್ಪಯಾಮಿ ॥ ಮುಖಪ್ರಕ್ಷಾಲನಂ ಸಮರ್ಪಯಾಮಿ ॥

**ಚಂದನಮ್ ।**

ಕರೋದ್ವರ್ತನಕಂ ದೇವ ಮಯಾ ದತ್ತಂ ಹಿ ಭಕ್ತಿತಃ ।
ಚಾರುಚಂದ್ರಪ್ರಭಂ ದಿವ್ಯಂ ಗೃಹಾಣ ಜಗದೀಶ್ವರ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಕರೋದ್ವರ್ತನಾರ್ಥೇ ಚಂದನಂ ಸಮರ್ಪಯಾಮಿ ॥
(ಅರ್ಘ್ಯಪಾತ್ರೆಗೆ ನೀರನ್ನು ಬಿಡಬೇಕು)

**ತಾಂಬೂಲಮ್ ।**

ಪೂಗೀಫಲಂ ಸಕರ್ಪೂರಂ ನಾಗವಲ್ಲೀದಲೈರ್ಯುತಂ ।
ಏಲಾಲವಂಗಸಂಯುಕ್ತಂ ತಾಂಬೂಲಂ ಪ್ರತಿಗೃಹ್ಯತಾಂ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಪೂಗೀಫಲತಾಂಬೂಲಂ ಸಮರ್ಪಯಾಮಿ ॥
(ಎಲೆ-ಅಡಿಕೆಯನ್ನು ಸಮರ್ಪಿಸಬೇಕು)

**ದಕ್ಷಿಣಾಃ ।**

ಹಿರಣ್ಯಗರ್ಭಗರ್ಭಸ್ಥಂ ಹೇಮಬೀಜಂ ವಿಭಾವಸೋಃ ।
ಅನಂತಪುಣ್ಯಫಲದಮತಃ ಶಾಂತಿಂ ಪ್ರಯಚ್ಛ ಮೇ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಸುವರ್ಣಪುಷ್ಪದಕ್ಷಿಣಾಂ ಸಮರ್ಪಯಾಮಿ ॥
(ದೇವರಿಗೆ ಎಲೆ-ಅಡಿಕೆಯಲ್ಲಿ ದಕ್ಷಿಣೆಯನ್ನಿಟ್ಟು ಸಮರ್ಪಿಸಬೇಕು)

**ಪೂರ್ಣಫಲಮ್ ।**

ಇದಂ ಫಲಂ ಮಯಾ ದೇವ ಸ್ಥಾಪಿತಂ ಪುರತಸ್ತವ ।
ತೇನ ಮೇ ಸಕಲಾವಾಪ್ತಿರ್ಭವೇಜ್ಜನ್ಮನಿ ಜನ್ಮನಿ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಪೂರ್ಣಫಲಂ ಸಮರ್ಪಯಾಮಿ ॥
(ಎಲೆ-ಅಡಿಕೆಯೊಂದಿಗೆ ದೇವರ ಬಲಭಾಗದಲ್ಲಿ ಪೂರ್ಣಫಲವನ್ನಿಡಬೇಕು)

**ಮಹಾನೀರಾಜನಮ್ ।**

ಶ್ರಿಯೇ ಜಾತಃಶ್ರಿಯ ಆನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದಧಾತಿ ।
ಶ್ರಿಯಂ ವಸಾನಾ ಅಮೃತತ್ವಮಾಯನ್ ಭವಂತಿ ಸತ್ಯಾಸಮಿಥಾ ಮಿತದ್ರೌ ॥

ಶ್ರಿಯ ಏವೈನಂ ತಚ್ಛ್ರಿಯಮಾ ದಧಾತಿ ಸಂತತಮೃಚಾವಷಟ್ ಕೃತ್ಯಂ ।
ಸಂತತ್ತ್ಯೈ ಸಂಧೀಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥
ಓಂ ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ ।
ಅರ್ಚಂತು ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ ಮಹಾನೀರಾಜನದೀಪಂ ಸಮರ್ಪಯಾಮಿ ॥
(ಐದು ಬತ್ತಿಯಿಂದ ದೇವರಿಗೆ ಮಂಗಳಾರತಿಯನ್ನು ಮಾಡಬೇಕು)

**ಮಂತ್ರಪುಷ್ಪಾಂಜಲಿ ।**

ನಮೋಽಸ್ತ್ವನಂತಾಯ.... ॥ ನಮೋ ಮಹದ್ಭ್ಯೋ ನಮೋ.... ॥ ಕಥಾತೇ ಅಗ್ನೇಶು.... ಯಜ್ಞೇನ ಯಜ್ಞ.... । ರಾಜಾಧಿರಾಜಾಯ.... ಸ್ವಸ್ತಿ ಸಾಮ್ರಾಜ್ಯಂ ಭೌಜ್ಯಂ.... ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಮಂತ್ರಪುಷ್ಪಂ ಸಮರ್ಪಯಾಮಿ ॥
(ದೇವರಿಗೆ ಮಂತ್ರಾಕ್ಷತೆ-ಹೂವನ್ನು ಸಮರ್ಪಿಸಬೇಕು)

**ಪ್ರದಕ್ಷಿಣಾ ।**

ನಾಭ್ಯಾ ಆಸೀದಂತರಿಕ್ಷಂ..... ॥ ಆರ್ದ್ರಾಂ ಯಃ ಕರಿಣೀಂ.... ॥
ಯಾನಿ ಕಾನಿ ಚ ಪಾಪಾನಿ ಜನ್ಮಾಂತರಕೃತಾನಿ ಚ ।
ತಾನಿ ತಾನಿ ವಿನಶ್ಯಂತಿ ಪ್ರದಕ್ಷಿಣ ಪದೇ ಪದೇ ॥
ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।
ತಸ್ಮಾತ್ ಕಾರುಣ್ಯಭಾವೇನ ರಕ್ಷ ರಕ್ಷ ರಮಾಪತೇ ॥
ಶ್ರೀಲಕ್ಷ್ಮೀಸಹಿತ ಶ್ರೀಸತ್ಯನಾರಾಯಣಾಯ ನಮಃ । ಪ್ರದಕ್ಷಿಣಾನ್ ಸಮರ್ಪಯಾಮಿ ॥
(ಪ್ರದಕ್ಷಿಣೆ ಹಾಕಬೇಕು)

**ನಮಸ್ಕಾರಾನ್ ।**

ಸಪ್ತಾಸ್ಯಾಸನ್ ಪರಿಧಯಃ.... ॥ ತಾಂ ಮ ಆವಹ ಜಾತವೇದೋ.... ॥
ನಮಃ ಸರ್ವಹಿತಾರ್ಥಾಯ ಜಗದಾಧಾರ ಹೇತವೇ ।
ಸಾಷ್ಟಾಂಗೋಽಯಂ ಪ್ರಣಾಮಸ್ತೇ ಪ್ರಯತ್ನೇನ ಮಯಾ ಕೃತಃ ॥
ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।
ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಉಚ್ಯತೇ ॥
ಶಾಠ್ಯೇನಾಪಿ ನಮಸ್ಕಾರಾನ್ ಕುರ್ವತಃ ಶಾರ್ಙ್ಗಪಾಣಯೇ ।
ಶತಜನ್ಮಾರ್ಜಿತಂ ಪಾಪಂ ತತ್ಕ್ಷಣಾದೇವ ನಶ್ಯತಿ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ನಮಸ್ಕಾರಾನ್ ಸಮರ್ಪಯಾಮಿ ॥
(ನಮಸ್ಕರಿಸಬೇಕು)

**ರಾಜೋಪಚಾರಪೂಜಾ ।**

ಗೃಹಾಣ ಪರಮೇಶಾನ ಸರತ್ನೇ ಛತ್ರಚಾಮರೇ ।
ದರ್ಪಣಂ ವ್ಯಜನಂ ಚೈವ ರಾಜಭೋಗಾಯ ಯತ್ನತಃ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಛತ್ರ-ಚಾಮರ-ವ್ಯಜನ-ದರ್ಪಣ-ನೃತ್ಯ-ಗೀತ-ವಾದ್ಯಾಂದೋಲಿಕಾದಿ ಸಮಸ್ತ ರಾಜೋಪಚಾರಾರ್ಥೇ ಅಕ್ಷತಾನ್ ಸಮರ್ಪಯಾಮಿ ॥
(ಮಂತ್ರಾಕ್ಷತೆಯನ್ನು ಸಮರ್ಪಿಸಬೇಕು)

**ಪ್ರಾರ್ಥನಾ ।**

ಯಜ್ಞೇನ ಯಜ್ಞಮಯಜಂತದೇವಾಃ.... ॥ ಯಃಶುಚಿಃ ಪ್ರಯತೋ.... ॥
ವಿದ್ಯಾಬುದ್ಧಿಧನೈಶ್ವರ್ಯಪುತ್ರಪೌತ್ರಾದಿಸಂಪದಃ ।
ಪುಷ್ಪಾಂಜಲಿಪ್ರದಾನೇನ ದೇಹಿ ಮೇ ಈಪ್ಸಿತಂ ವರಂ ॥
(ಮಂತ್ರಾಕ್ಷತೆ-ಹೂಗಳನ್ನು ಕೈಯಲ್ಲಿ ಹಿಡಿದುಕೊಂಡು ಮೇಲಿನ ಮಂತ್ರಗಳನ್ನು ಪಠಿಸಿ, ದೇವರಿಗೆ ಅರ್ಪಣೆ ಮಾಡಬೇಕು)

**ಕ್ಷಮಾಪನಮ್ ।**

ಆವಾಹನಂ ನ ಜಾನಾಮಿ ನ ಜಾನಾಮಿ ವಿಸರ್ಜನಂ ।
ಪೂಜಾಂ ಚೈವ ನ ಜಾನಾಮಿ ಕ್ಷಮ್ಯತಾಂ ಪುರುಷೋತ್ತಮ ॥
ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಾಯ ನಮಃ । ಪ್ರಾರ್ಥನಾಂ ಸಮರ್ಪಯಾಮಿ ॥
(ಪ್ರಾರ್ಥಿಸಬೇಕು)

**ಸಮಾಪನಮ್ ।**

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಂ ॥

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।
ಯತ್ಪೂಜಿತಂ ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥

ಅನೇನ ಸಪರಿವಾರಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಪೂಜನೇನ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತಭಾರತೀರಮಣಮುಖ್ಯ-ಪ್ರಾಣಾಂತರ್ಗತ ಶ್ರೀಲಕ್ಷ್ಮೀಸಹಿತಶ್ರೀಸತ್ಯನಾರಾಯಣಃ ಪ್ರೀಯತಾಂ ಸುಪ್ರೀತೋ ವರದೋ ಭವತು ಶ್ರೀಕೃಷ್ಣಾರ್ಪಣಮಸ್ತು ॥

॥ ಇತಿ ಶ್ರೀಸತ್ಯನಾರಾಯಣವ್ರತಮ್ ಸಂಪೂರ್ಣಮ್ ॥



# ।। ಶ್ರೀಸತ್ಯನಾರಾಯಣವ್ರತದ ಕಥೆ ।।

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ।।

ಸ್ವಸ್ತ್ಯಸ್ತುಸತಾಂ ಅಖಿಲಸನ್ಮಂಗಲಾನಿ ಭವಂತು ಶ್ಲೋಕೈಕ
ಶ್ರವಣಪಠಣಮಾತ್ರೇಣ ವಕ್ತುಶ್ಚ ಶ್ರೋತೃಣಾಂ ನಿಖಿಲ
ಕಲಿಕೃತಕಲ್ಮಷಾಪನೋದನಪಟುತರೇ ಧರ್ಮಾದ್ಯಖಿಲ
ಪುರುಷಾರ್ಥಸಾಧನೀಭೂತೇ ಸ್ಕಂದಪುರಾಣೇ ರೇವಾಖಂಡೇ
ಶ್ರೀಸತ್ಯನಾರಾಯಣಕಥಾ-ಪ್ರಾರಂಭಃ ।।

**ವ್ಯಾಸ ಉವಾಚ –**

**ಏಕದಾ ನೈಮಿಷಾರಣ್ಯೇ ಋಷಯ ಶೌನಕಾದಯಃ ।**
**ಪಪ್ರಚ್ಛುರ್ಮುನಯಃ ಸರ್ವೇ ಸೂತಂ ಪೌರಾಣಿಕಂ ಖಲು ।। ೧ ।।**

❑❑

।। ಶ್ರೀಹರಿ-ವಾಯು-ಗುರುಭ್ಯೋ ನಮಃ ।।

ಶ್ರೀವ್ಯಾಸರು ಹೇಳುತ್ತಾರೆ - ಒಂದು ದಿನ ನೈಮಿಷವೆಂಬ ಅರಣ್ಯದಲ್ಲಿ ವಾಸಿಸುತ್ತಿರುವಂಥ ಶೌನಕ ಮೊದಲಾದ ಋಷಿಗಳು ಪುರಾಣಿಕರಾದ ಸೂತರಿಗೆ ಪ್ರಶ್ನೆ ಮಾಡುತ್ತಾರೆ. ಏನೆಂದರೆ, 'ಎಲೈ ಮಹಾಮುನಿಯಾದ ಸೂತರೇ, ಯಾವ ವ್ರತದಿಂದ ಅಥವಾ ತಪಸ್ಸಿನಿಂದ ಇಚ್ಛಿತವಾದ ಫಲ ಪ್ರಾಪ್ತವಾಗುವುದೋ ಅದೆಲ್ಲವನ್ನೂ ಕೇಳುವುದಕ್ಕಾಗಿ ಇಚ್ಛಿಸಿರುತ್ತೇವೆ. ಕೃಪೆಮಾಡಿ ಹೇಳಿರಿ' ಈ ರೀತಿ ಋಷಿಗಳು ಮಾಡಿದ ಪ್ರಶ್ನೆಗೆ ಸೂತರು ಉತ್ತರಿಸುತ್ತಾರೆ - ಋಷಿಗಳಿರಾ, ನಾರದರಿಂದಲೇ ಕೇಳಲ್ಪಟ್ಟ ಲಕ್ಷ್ಮೀಪತಿಯಾದ ನಾರಾಯಣನು ಅವರಿಗೆ ಯಾವ ರೀತಿಯಾಗಿ ಹೇಳಿದನೋ ಅದನ್ನು ನಿಮಗೆ ತಿಳಿಸುತ್ತೇನೆ ಕೇಳಿರಿ. ಒಂದು ಬಾರಿ ಯೋಗಿಯಾದ ನಾರದರು ಲೋಕಗಳನ್ನೆಲ್ಲ ಸಂಚರಿಸುತ್ತಾ ಮನುಷ್ಯರಲ್ಲಿ ಅನುಗ್ರಹ ಮಾಡಬೇಕೆಂಬ ಇಚ್ಛೆಯಿಂದ ಭೂಲೋಕಕ್ಕೆ ಬಂದರು. ಅಲ್ಲಿ ಕೆಟ್ಟ ಕರ್ಮಗಳನ್ನು ಮಾಡಿ, ಆ ಪಾಪವಶಾತ್ ನೀಚಜನ್ಮಗಳಲ್ಲಿ ಹುಟ್ಟಿ ತಮ್ಮ ತಮ್ಮ

ಕರ್ಮಾನುಸಾರ ಅತಿ ದುಃಖದಿಂದ ಬಳಲುತ್ತಿರುವ ಜನರನ್ನು ನೋಡಿ, ಯಾವ ಉಪಾಯ-ದಿಂದ ಈ ಜನರ ದುಃಖವೆಲ್ಲ ನಾಶವಾಗುವುದೆಂಬುದಾಗಿ ತಮ್ಮ ಮನಸ್ಸಿನಲ್ಲಿಯೇ ವಿಚಾರಿಸಿ, ಕೂಡಲೇ ವಿಷ್ಣುಲೋಕಕ್ಕೆ ಹೋದರು. ಅಲ್ಲಿ ಶುಕ್ಲವರ್ಣನಾಗಿಯೂ, ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿ, ಕೊರಳಲ್ಲಿರುವ ವನಮಾಲೆಯಿಂದ ಶೋಭಿಸುತ್ತಿರುವಂಥ, ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಮನ್ನಾರಾಯಣನನ್ನು ನೋಡಿ, ದೇವತೆಗಳಿಗೆ ಒಡೆಯನಾದ ಆ ಭಗವಂತನನ್ನು ನಾರದರು ಸ್ತುತಿಸಲಾರಂಭಿಸಿದರು. '**ವಚನಗಳಿಗೂ ಮನಸ್ಸಿಗೂ ದೂರನಾದಂಥವನೇ, ಅನಂತಶಕ್ತಿಯುಳ್ಳವನೇ, ಆದಿಮಧ್ಯಾಂತರಹಿತನೇ, ಸತ್ವಾದಿಪ್ರಾಕೃತ-ಗುಣಗಳಿಂದ ರಹಿತನೇ, ಆನಂದಾದಿಗುಣಗಳಿಂದ ಪೂರ್ಣನೇ, ಎಲ್ಲಕ್ಕೂ ನೀನು ಆದಿಭೂತನೇ ಮತ್ತು ನಿನ್ನ ಭಕ್ತರ ದುಃಖಗಳನ್ನೆಲ್ಲಾ ದೂರಮಾಡುವಂತಹ ನಿನಗೆ ನಮಸ್ಕಾರವು**' ಈ ಬಗೆಯಾಗಿ ಸ್ತುತಿಸುವಂಥ ನಾರದರ ಸ್ತೋತ್ರವನ್ನು ಕೇಳಿ, ಭಗವಂತನು - 'ಎಲೈ ನಾರದನೇ! ಇಲ್ಲಿ ನೀನು ಏಕೆ ಬಂದಿರುವಿ? ಮತ್ತು ನಿನ್ನ ಮನಸ್ಸಿನಲ್ಲಿರುವುದು ಏನು?' ಎಂದು ತಾನು ಎಲ್ಲ ಬಲ್ಲವನಾದರೂ ಕೇಳದೆ ಯಾವುದನ್ನೂ ಹೇಳಬಾರದು ಎಂಬ ವಿಚಾರವನ್ನು ಮನಸ್ಸಿನಲ್ಲಿ ಮಾಡಿದ ಶ್ರೀಹರಿಯು ಅದೆಲ್ಲಾ ನನಗೆ ತಿಳಿಸು ಎನ್ನಲು ನಾರದರು ಹೇಳುತ್ತಾರೆ. 'ಭಗವಂತನೇ, ಮನುಷ್ಯಲೋಕದಲ್ಲಿರುವ ಜನರೆಲ್ಲರೂ ತಮ್ಮ ತಮ್ಮ ಪಾಪಕರ್ಮಗಳಿಂದ ನೀಚಜನ್ಮಗಳಲ್ಲಿ ಹುಟ್ಟಿ ಬಹುವಿಧವಾಗಿ ದುಃಖ ಪಡುತ್ತಿರುವರು. ಆ ಜನರ ಅಂತಹ ದುಃಖವು ಯಾವ ಸುಲಭ ಉಪಾಯದಿಂದ ನಾಶವಾಗುವುದೆಂಬುದನ್ನು ಕೇಳಲಿಚ್ಛಿಸುತ್ತೇನೆ. ಆದರೆ ನಿನ್ನ ಅಂತಃಕರಣವು ನನ್ನಲ್ಲಿ ಪೂರ್ಣವಾಗಿದ್ದುದು ನಿಜವಾದರೆ ಅಂತಹ ಉಪಾಯವನ್ನು ನನಗೆ ನೀನು ತಿಳಿಸು' ಎಂದು ಪ್ರಾರ್ಥಿಸಿದರು. ಭಗವಂತನು - 'ನಾರದನೇ, ಜನರಲ್ಲಿ ಅನುಗ್ರಹ ಮಾಡುವ ಅಪೇಕ್ಷೆಯಿಂದ ಒಳ್ಳೆಯ ಪ್ರಶ್ನೆ ಮಾಡಿದ್ದೀಯೆ. ಒಳ್ಳೆಯದು! ಏನು ಮಾಡುವುದರಿಂದ ಜನರು ಅಂಥ ದುಃಖಗಳಿಂದ ಮುಕ್ತರಾಗು-ವರೆಂಬುದನ್ನು ನಿನಗೆ ನಾನು ಹೇಳುತ್ತೇನೆ ಕೇಳು. ಸ್ವರ್ಗದಲ್ಲಿಯೂ ಮತ್ತು ಮನುಷ್ಯಲೋಕ-ದಲ್ಲಿಯೂ ಅತಿ ದುರ್ಲಭವಾದಂತಹ ಒಂದು ವ್ರತವಿರುತ್ತದೆ. ಆದರೆ ನಾರದನೇ, ನಿನ್ನಲ್ಲಿ ಪ್ರೀತಿಯು ವಿಶೇಷವಿರುವುದರಿಂದ ನಿನಗೆ ಅತೀ ಗೌಪ್ಯವಾದ ಒಂದು ವ್ರತವನ್ನು ತಿಳಿಸುತ್ತೇನೆ, ಕೇಳು. ಅದು **ಶ್ರೀಸತ್ಯನಾರಾಯಣವ್ರತ.** ಇದನ್ನು ವಿಧಾನಪೂರ್ವಕವಾಗಿ ಮಾಡುವುದರಿಂದ ಕೂಡಲೇ ಇಹದಲ್ಲಿ ಎಲ್ಲ ದುಃಖಗಳು ನಾಶವಾಗಿ ಕಡೆಗೆ ಯಥೇಚ್ಛ ಸುಖವನ್ನನು-ಭವಿಸುವುದಲ್ಲದೇ ಮೋಕ್ಷಸುಖವನ್ನು ಹೊಂದುವರು'. ಹೀಗೆ ಭಗವದ್ವಾಕ್ಯಗಳನ್ನು ಕೇಳಿ, ನಾರದರು - 'ಈ ವ್ರತ ಮಾಡುವುದರಿಂದ ಫಲವೇನು? ವಿಧಾನ ಹೇಗೆ? ಮತ್ತು ಇದನ್ನು ಮೊದಲು ಯಾರು ಮಾಡಿದರು? ಹಾಗೂ ಕಾಲವು ಯಾವುದು? ಇದನ್ನೆಲ್ಲ ಸವಿಸ್ತಾರವಾಗಿ ಹೇಳು' ಎನ್ನಲು, ಭಗವಂತನು - 'ಈ ವ್ರತವನ್ನು ಮಾಡುವುದರಿಂದ ದುಃಖ-ಶೋಕಗಳೆಲ್ಲ ನಾಶ ಹೊಂದುತ್ತವೆ. ಧನ-ಧಾನ್ಯಾದಿಗಳು ಅಭಿವೃದ್ಧಿಯಾಗುತ್ತವೆ. ಸೌಭಾಗ್ಯ, ಸಂತತಿ ಪ್ರಾಪ್ತಿಯಾಗುವುದು ಮತ್ತು ಸರ್ವಕಾರ್ಯಗಳೂ ಈ ವ್ರತದ ಸ್ಮರಣದಿಂದಲೇ ಸಿದ್ಧಿಯನ್ನು

ಹೊಂದುವುವು! ಇದೇ ಈ ವ್ರತದ ಫಲವು. ಇಂತಹ ವ್ರತವನ್ನು ಮಾಡುವುದಾದರೆ ತನ್ನ ಮನಸ್ಸಿನಲ್ಲಿ ಯಾವ ದಿನ ಮಾಡಬೇಕೆಂದಿರುವದೋ ಆ ದಿನ ಭಕ್ತಿಪೂರ್ವಕವಾಗಿ 'ನಿಶಾಮುಖ' ಅಂದರೆ ಸಾಯಂಕಾಲದಲ್ಲಿ, ಬ್ರಾಹ್ಮಣರಿಂದಲೂ ಮತ್ತು ಬಾಂಧವರಿಂದಲೂ ಕೂಡಿಕೊಂಡು ಧರ್ಮದಲ್ಲಿ ಬುದ್ಧಿಯುನ್ನಿಟ್ಟವನಾಗಿ ಶ್ರೀಸತ್ಯನಾರಾಯಣನನ್ನು ಭಕ್ತಿಪೂರ್ವಕವಾಗಿ ಪೂಜಿಸಬೇಕು. ಉತ್ತಮ ಸಪಾದ ಭಕ್ಷ್ಯವನ್ನು ನೈವೇದ್ಯ ಕೊಡಬೇಕು. ಬಾಳೇಹಣ್ಣು, ತುಪ್ಪ, ಹಾಲು ಮತ್ತು ಗೋಧಿಯ ಸಜ್ಜಿಗೆ, ಗೋಧಿಯ ಸಜ್ಜಿಗೆಯು ಸಿಗದಿದ್ದ ಪಕ್ಷದಲ್ಲಿ ಅಕ್ಕಿಯ ಸಜ್ಜಿಗೆಯನ್ನು, ಸಕ್ಕರೆಯನ್ನು, ಸಕ್ಕರೆ ಇಲ್ಲದಿದ್ದರೆ ಬೆಲ್ಲವನ್ನು ಒಂದೇ ಪಾತ್ರೆಯಲ್ಲಿ ಎಲ್ಲ ಪದಾರ್ಥಗಳನ್ನು ಸೇರಿಸಿ, ಪ್ರಸಾದ ಮಾಡಿ ನಿವೇದಿಸಬೇಕು. ಆಮೇಲೆ ತನ್ನ ಆಪ್ತೇಷ್ಟರುಗಲಿಂದ ಯುಕ್ತನಾಗಿ ಬ್ರಾಹ್ಮಣನಿಂದ ಶ್ರೀಸತ್ಯನಾರಾಯಣನ ಕಥೆಯನ್ನು ಕೇಳಿ, ಆ ಬ್ರಾಹ್ಮಣನಿಗೆ ತಾಂಬೂಲ-ದಕ್ಷಿಣಾದಿಗಳನ್ನು ಕೊಟ್ಟು, ಬ್ರಾಹ್ಮಣರಿಗೆ ಭೋಜನಕ್ಕೆ ಹಾಕಿ, ತದನಂತರ ಆಪ್ತೇಷ್ಟರುಗಳಿಂದ ಕೂಡಿ, ಆ ಪ್ರಸಾದ ನೈವೇದ್ಯವನ್ನು ಭಕ್ತಿಪೂರ್ವಕ ಸ್ವೀಕರಿಸಿ, ಆ ದಿನ ರಾತ್ರಿಯಲ್ಲಿ ನೃತ್ಯ-ಗೀತಗಳನ್ನು ಮಾಡಬೇಕು. ಆಮೇಲೆ ಶ್ರೀಸತ್ಯನಾರಾಯಣನನ್ನು ಮನಸಾ ಸ್ಮರಿಸುತ್ತಾ ಮನೆಗೆ ಹೋಗಬೇಕು. ಹೀಗೆ ಮಾಡಿದಲ್ಲಿ ಮನುಷ್ಯ ಮನೋರಥವು ಕೂಡಲೇ ಸಿದ್ಧಿಯಾಗವುದು. ವಿಶೇಷವಾಗಿ ಭೂತಲದಲ್ಲಿ ಈ ವ್ರತವು ಕಲಿಯುಗದಲ್ಲಿ ಬಹು ಸುಲಭವಾಗಿ, ತೀವ್ರವಾಗಿ ಫಲ ಕೊಡುವಂತಹದ್ದಾಗಿದೆ.' ಎಂದು ತಿಳಿಸಿದನು.

॥ ಇಲ್ಲಿಗೆ ಸ್ಕಾಂದಪುರಾಣದ ರೇವಾಕಾಂಡದಲ್ಲಿ
ಶ್ರೀಸತ್ಯನಾರಾಯಣಕಥೆಯ ಪ್ರಥಮ ಅಧ್ಯಾಯವು ಮುಗಿಯಿತು ॥

ಸೂತರು ಹೇಳುತ್ತಾರೆ - ನಂತರ ಈ ವ್ರತವನ್ನು ಪೂರ್ವದಲ್ಲಿ ಯಾರು ಮಾಡಿದರೆಂಬುವ ವೃತ್ತಾಂತವನ್ನು ಹೇಳುತ್ತೇನೆ ಕೇಳಿರಿ. ಕಾಶೀಪಟ್ಟಣದಲ್ಲಿ ಅತಿ ದರಿದ್ರನಾದ ಒಬ್ಬ ಬ್ರಾಹ್ಮಣನಿದ್ದನು. ಆತನು ಹಸಿವೆ-ನೀರಡಿಕೆಗಳಿಂದ ಪೀಡಿತನಾಗಿ, ಅನ್ನಾಹಾರಗಳು ಸಿಗದೆ ಅಲೆಯುತ್ತಿದ್ದನು. ದಾರಿದ್ರ್ಯದಿಂದ ಅತಿ ದುಃಖಿತನಾದ ಬ್ರಾಹ್ಮಣನನ್ನು ನೋಡಿ, ಬ್ರಾಹ್ಮಣರಲ್ಲಿ ಅಂತಃಕರಣವುಳ್ಳ ಶ್ರೀಸತ್ಯನಾರಾಯಣನು ವೃದ್ಧ ಬ್ರಾಹ್ಮಣನ ರೂಪವನ್ನು ಧರಿಸಿ, ಆತನ ಹತ್ತಿರ ಬಂದು, ಆ ಬ್ರಾಹ್ಮಣನಿಗೆ - 'ಹೇ ಬ್ರಾಹ್ಮಣನೇ, ನೀನು ನಿತ್ಯದಲ್ಲಿ ದುಃಖಿತನಾಗಿ ಭೂಮಿಯಲ್ಲಿ ಏಕೆ ಅಲೆಯುತ್ತಿರುವೆ?' ಎಂದು ಕೇಳಲು, ಬ್ರಾಹ್ಮಣನು - 'ಹೇ ಸ್ವಾಮಿ! ನಾನು ಬ್ರಾಹ್ಮಣನಿದ್ದು, ಅತಿ ದರಿದ್ರನು. ಹೊಟ್ಟೆ ತುಂಬಿಸಿಕೊಳ್ಳುವುದಕ್ಕಾಗಿ ಭಿಕ್ಷೆಯನ್ನು ಬೇಡುತ್ತಾ ಭೂಮಿಯಲ್ಲಿ ಹೀಗೆ ಸಂಚರಿಸುತ್ತೇನೆ. ಈ ನನ್ನ ದಾರಿದ್ರ್ಯ ನಾಶವಾಗುವಂಥ ಉಪಾಯವನ್ನು ನೀನು ಬಲ್ಲವನಿದ್ದರೆ ನನ್ನ ಮೇಲಿನ ಅಂತಃಕರಣದಿಂದ ತಿಳಿಸು' ಎಂದು ವಿನಂತಿಸಿದನು. ವೃದ್ಧ ಬ್ರಾಹ್ಮಣನ ರೂಪ ಧರಿಸಿದ ಶ್ರೀಸತ್ಯನಾರಾಯಣನು - 'ಬ್ರಾಹ್ಮಣನೇ! ಸತ್ಯನಾರಾಯಣನೆಂಬ ಶ್ರೀವಿಷ್ಣುವು ಮನಸ್ಸಿನಲ್ಲಿ ಅಪೇಕ್ಷಿಸಿದ ಫಲಗಳನ್ನು ಕೊಡುತ್ತಾನೆ. ನೀನು ಆತನ ಪೂಜೆಯನ್ನು ಮಾಡು. ಈ ಶ್ರೀಸತ್ಯನಾರಾಯಣನ ವ್ರತವನ್ನು

ಮಾಡುವುದರಿಂದ ಮನುಷ್ಯನು ತತ್ಕಾಲದಲ್ಲಿ ಎಲ್ಲ ದುಃಖಗಳಿಂದ ಮುಕ್ತನಾಗುತ್ತಾನೆ' ಎಂದು ಹೇಳಿ ಆ ವ್ರತದ ವಿಧಾನವನ್ನು ಆ ಬ್ರಾಹ್ಮಣನಿಗೆ ತಿಳಿಸಿ ಸ್ವಲ್ಪ ದೂರ ಹೋಗಿ ಅದೃಶ್ಯನಾದನು. ಆಗ ಬ್ರಾಹ್ಮಣನು 'ವೃದ್ಧಬ್ರಾಹ್ಮಣನು ಹೇಳಿದಂಥ ವ್ರತವನ್ನು ನಾನು ಮಾಡುವೆನು' ಎಂದು ಮನಸಾ ನಿಶ್ಚಯಿಸಿದನು. ಈ ಚಿಂತೆಯಿಂದ ಆತನಿಗೆ ಆ ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ. ಅದರಿಂದ ಆತನು ಪ್ರಾತಃಕಾಲದಲ್ಲಿ ಎದ್ದು, ಈ ಹೊತ್ತು ನಾನು ಶ್ರೀಸತ್ಯನಾರಾಯಣ ವ್ರತವನ್ನು ಮಾಡುವುದು ನಿಶ್ಚಯವೆಂದು ಮನಸ್ಸಿನಲ್ಲಿ ಸಂಕಲ್ಪವನ್ನು ಮಾಡಿ, ಭಿಕ್ಷೆಗಾಗಿ ಹೋದನು. ಆ ದಿವಸ ಆತನಿಗೆ ಪ್ರತಿದಿವಸದಲ್ಲಿ ಸಿಗುವ ದ್ರವ್ಯಕ್ಕಿಂತಲೂ ಹೆಚ್ಚು ದ್ರವ್ಯವು ಸಿಗಲು, ಸಂತೋಷದಿಂದ ಅದೇ ದ್ರವ್ಯವನ್ನು ವೆಚ್ಚಮಾಡಿ ತನ್ನ ಬಂಧು ಜನರಿಂದ ಕೂಡಿಕೊಂಡು ಶ್ರೀಸತ್ಯನಾರಾಯಣನ ವ್ರತವನ್ನು ಮಾಡಿದನು. ಆ ವ್ರತ ಪ್ರಭಾವದಿಂದ ಆ ಬ್ರಾಹ್ಮಣ ಶ್ರೇಷ್ಠನ ದುಃಖವೆಲ್ಲ ನಾಶ ಹೊಂದಿತು. ಅವನು ಧನಧಾನ್ಯಾದಿ ಐಶ್ವರ್ಯಗಳಿಂದ ಸಮೃದ್ಧನಾದನು. ಆ ದಿನವನ್ನಾರಂಭಿಸಿ ಆ ಉತ್ತಮ ಬ್ರಾಹ್ಮಣನು ಪ್ರತಿಯೊಂದು ತಿಂಗಳಲ್ಲಿ ಈ ಸತ್ಯನಾರಾಯಣನ ವ್ರತವನ್ನು ಮಾಡಿ, ಎಲ್ಲ ಪಾಪಗಳಿಂದ ಮುಕ್ತನಾಗಿ, ದುರ್ಲಭವಾದ ಮೋಕ್ಷವನ್ನು ಹೊಂದಿದನು. 'ಹೇ ನಾರದನೇ, ಈ ವ್ರತವನ್ನು ಭೂಲೋಕದಲ್ಲಿ ಮಾಡಿದ ಮನುಷ್ಯನು ಎಲ್ಲ ದುಃಖಗಳಿಂದ ಮುಕ್ತನಾಗುವನು' ಹೀಗೆ ದಯಾಳುವಾದ ಶ್ರೀಮನ್ನಾರಾಯಣನು ನಾರದರಿಗೆ ಹೇಳಿದ್ದನ್ನು ನಿಮ್ಮ ಮುಂದೆ ಹೇಳಿದೆನು. ಋಷಿಗಳಿರಾ, ನಿಮಗೆ ಇನ್ನೇನು ಹೇಳಲಿ? ಎಂದು ಸೂತರು ಕೇಳಿದರು. ಋಷಿಗಳು - 'ಆ ಬ್ರಾಹ್ಮಣನಿಂದ ಆ ವ್ರತಪ್ರಭಾವವನ್ನು ಮತ್ತೆ ಯಾರು ಕೇಳಿದರು? ಈ ವ್ರತವು ಭೂಮಿಯಲ್ಲಿ ಹೇಗೆ ಪ್ರಸಿದ್ಧಿಯನ್ನು ಹೊಂದಿತು? ಇದನ್ನೆಲ್ಲ ನಮ್ಮ ಮುಂದೆ ಹೇಳು. ಕೇಳಬೇಕೆಂಬ ಇಚ್ಛೆಯು ಬಲವಾಗಿದೆ. ಶ್ರದ್ಧೆಯೂ ಹೆಚ್ಚುತ್ತಿದೆ' ಹೀಗೆ ಋಷಿಗಳ ಮಾತನ್ನು ಕೇಳಿ, ಸೂತರು ಹೇಳಿದರು - 'ಋಷಿಗಳಿರಾ, ಈ ವ್ರತವನ್ನು ಭೂಮಿಯಲ್ಲಿ ಮತ್ತೂ ಯಾರು ಮಾಡಿದರೆಂಬುದನ್ನು ಹೇಳುತ್ತೇನೆ ಕೇಳಿರಿ. ಒಂದು ದಿನ ಆ ಬ್ರಾಹ್ಮಣನು ತನ್ನ ಐಶ್ವರ್ಯಾನುಸಾರವಾಗಿ ಬಾಂಧವರಿಂದಲೂ, ಸ್ವಜನರಿಂದಲೂ, ಕೂಡಿಕೊಂಡು ಶ್ರೀಸತ್ಯನಾರಾಯಣನ ವ್ರತವನ್ನು ಮಾಡುತ್ತಿರಲು, ಅದೇ ಸಮಯದಲ್ಲಿ ಒಬ್ಬ ಕಟ್ಟಿಗೆ ಹೊರೆಯನ್ನು ಮಾರುವವನು ಬಂದು ಹೊರಗೆ ಕಟ್ಟಿಗೆ ಹೊರೆಯನ್ನು ಇಟ್ಟು ನೀರಡಿಕೆಯಿಂದ ಪೀಡಿತನಾಗಿ, ಆ ಬ್ರಾಹ್ಮಣನ ಮನೆಯಲ್ಲಿ ಹೋಗಿ, ಆತನು ಮಾಡುತ್ತಿರುವಂಥ ಶ್ರೀಸತ್ಯನಾರಾಯಣನ ವ್ರತವನ್ನು ಮಾಡಿ, ಆತನಿಗೆ ನಮಸ್ಕರಿಸಿ, 'ಬ್ರಾಹ್ಮಣನೇ, ನೀನು ಏನು ಮಾಡಲಾರಂಭಿಸಿರುವಿ? ಮತ್ತು ಇನದ್ನು ಮಾಡುವುದರಿಂದ ಏನು ಫಲ ಬರುವುದು. ಇದನ್ನೆಲ್ಲ ನನ್ನ ಮುಂದೆ ಸವಿಸ್ತಾರವಾಗಿ ಹೇಳು' ಎಂದು ಕೇಳಲು ಬ್ರಾಹ್ಮಣನು - 'ಎಲೈ ಕಟ್ಟಿಗೆ ಮಾರುವವನೇ, ಎಲ್ಲರ ಮನೋರಥವನ್ನು ಪೂರ್ಣ ಮಾಡಿಕೊಡುವಂತಹ ಶ್ರೀಸತ್ಯನಾರಾಯಣನ ವ್ರತವನ್ನು ನಾನು ಮಾಡುತ್ತೇನೆ. ಈ ವ್ರತದ ಪ್ರಭಾವದಿಂದಲೇ ಧನ-ಧಾನ್ಯಾದಿ-ಐಶ್ವರ್ಯವು ನನಗೆ ಪ್ರಾಪ್ತವಾಗಿರುತ್ತದೆ' ಎಂದು ಹೇಳಲು, ಆ ಕಟ್ಟಿಗೆ

ಮಾರುವವನು ಬ್ರಾಹ್ಮಣನಿಂದ ಆ ವ್ರತದ ವಿಧಾನವನ್ನೆಲ್ಲ ತಿಳಿದುಕೊಂಡು ಸಂತೋಷದಿಂದ ಶ್ರೀಸತ್ಯನಾರಾಯಣನ ಪ್ರಸಾದವನ್ನು ಭಕ್ಷಿಸಿ, ನೀರನ್ನು ಕುಡಿದು, ಊಟವನ್ನು ಮಾಡಿ, ತನ್ನ ಊರಿಗೆ ಹೋದನು. ಅನಂತರ ಆ ಕಾಷ್ಠವಿಕ್ರೇತನು ಶ್ರೀಸತ್ಯನಾರಾಯಣನನ್ನು ಕುರಿತು ಹೀಗೆ ಪ್ರಾರ್ಥಿಸಿದನು - 'ಈ ದಿನ ಊರಲ್ಲಿ ಈ ಕಟ್ಟಿಗೆ ಹೊರೆಯನ್ನು ಮಾರುವುದರಿಂದ ನನಗೆ ಏನು ದ್ರವ್ಯ ಸಿಗುವುದೋ, ಆ ದ್ರವ್ಯದಿಂದ ನಾನು ಶ್ರೀಸತ್ಯನಾರಾಯಣವ್ರತವನ್ನು ಮಾಡುವೆನು' ಎಂದು ಮನಸಾ ನಿಶ್ಚಯ ಮಾಡಿ, ಕೂಡಲೇ ಕಟ್ಟಿಗೆಯ ಹೊರೆಯನ್ನು ತನ್ನ ತಲೆಯ ಮೇಲೆ ಹೊತ್ತುಕೊಂಡವನಾಗಿ ಧನಿಕರಿರುವ ಓಣಿಯಲ್ಲಿ ಹೋಗಿ ಮಾರಲು, ಆ ದಿನ ಆತನಿಗೆ ದಿನಕ್ಕಿಂತ ಎರಡು ಪಾಲು ಹೆಚ್ಚು ದ್ರವ್ಯವು ಸಿಕ್ಕಿತು. ಅದರಿಂದ ಅವನು ಸಂತುಷ್ಟನಾಗಿ ಬಾಳೆಹಣ್ಣು, ತುಪ್ಪ, ಸಕ್ಕರೆ, ಹಾಲು, ಗೋಧಿಯ ಸಜ್ಜಿಗೆ ಇವುಗಳನ್ನು ತೆಗೆದುಕೊಂಡು ಸಪಾದ ಭಕ್ಷ್ಯ ಮಾಡಿ, ತನ್ನ ಬಂಧುಜನರಿಂದ ಕೂಡಿ, ವಿಧಿಪೂರ್ವಕ ಶ್ರೀಸತ್ಯನಾರಾಯಣನ ವ್ರತವನ್ನು ಮಾಡಿದನು. ಆ ವ್ರತ ಪ್ರಭಾವದಿಂದ ಐಶ್ವರ್ಯ, ಮಕ್ಕಳು ಇವುಗಳಿಂದ ಯುಕ್ತನಾಗಿ ಇಹಲೋಕದಲ್ಲಿ ಪೂರ್ಣ ಸೌಖ್ಯವನ್ನು ಅನುಭವಿಸಿ, ಅನಂತರ ಸತ್ಯಪುರಕ್ಕೆ ಹೋದನು.'

॥ ಇಲ್ಲಿಗೆ ಸ್ಕಾಂದಪುರಾಣದ ರೇವಾಕಾಂಡದಲ್ಲಿ
ಶ್ರೀಸತ್ಯನಾರಾಯಣಕಥೆಯ ದ್ವಿತೀಯ ಅಧ್ಯಾಯವು ಮುಗಿಯಿತು ॥

ಸೂತರು ಹೇಳಿದರು - ಋಷಿಗಳಿರಾ, ಮತ್ತೂ ಒಂದು ಕಥೆಯನ್ನು ಹೇಳುತ್ತೇನೆ ಕೇಳಿರಿ. ಪೂರ್ವದಲ್ಲಿ ಉಲ್ಕಾಮುಖನೆಂಬ ಒಬ್ಬ ರಾಜನಿದ್ದನು. ಅವನು ಇಂದ್ರಿಯಗಳನ್ನು ಯಾವತ್ತೂ ತನ್ನ ಸ್ವಾಧೀನದಲ್ಲಿಟ್ಟುಕೊಂಡಂಥವನೂ ಮತ್ತು ಸತ್ಯವಾದ ಮಾತುಗಳನ್ನು ಆಡುವವನೂ ಆದ ಆ ರಾಜನು ನಿತ್ಯವೂ ದೇವಾಲಯಕ್ಕೆ ಹೋಗಿ, ಬ್ರಾಹ್ಮಣರಿಗೆ ವಿಶೇಷವಾಗಿ ದಾನವನ್ನು ಕೊಟ್ಟು, ಅವರನ್ನು ಸಂತೋಷಪಡಿಸುತ್ತಿದ್ದನು. ಈ ಉಲ್ಕಾಮುಖ ರಾಜನು ಕಮಲದಂತೆ ಮುಖವುಳ್ಳ 'ಪ್ರಮುಗ್ಧಾ' ಎಂಬ ತನ್ನ ಹೆಂಡತಿಯಿಂದ ಕೂಡಿಕೊಂಡು 'ಭದ್ರಶೀಲಾ' ಎಂಬ ನದಿಯ ದಂಡೆಯಲ್ಲಿ ಶ್ರೀಸತ್ಯನಾರಾಯಣನ ವ್ರತವನ್ನು ಮಾಡುತ್ತಿದ್ದನು. ಅದೇ ಸಮಯದಲ್ಲಿ ಒಬ್ಬ ವ್ಯಾಪಾರಿಯು ಹಡಗಿನಲ್ಲಿ ಬಹಳ ದ್ರವ್ಯವನ್ನು ತುಂಬಿ, ವ್ಯಾಪಾರಕ್ಕಾಗಿ ಬಂದು, ಅಲ್ಲಿಯೇ ನದಿಯ ದಂಡೆಯಲ್ಲಿ ವ್ರತವನ್ನು ಮಾಡುತ್ತಾ ಕುಳಿತಿರುವ ರಾಜನನ್ನು ನೋಡಿ, ತನ್ನ ಹಡಗನ್ನು ಅಲ್ಲಿಯೇ ನಿಲ್ಲಿಸಿ, ತಾನು ರಾಜನ ಕಡೆಗೆ ಹೋಗಿ, ಆತನಿಗೆ ನಮಸ್ಕರಿಸಿ, ವಿನಯದಿಂದ ಪ್ರಶ್ನೆ ಮಾಡಿದನು. ಏನೆಂದರೆ - 'ರಾಜನೇ ಇಂತಹ ಭಕ್ತಿಯುಕ್ತವಾದ ಮನಸ್ಸಿನಿಂದ ನೀನು ಏನು ಮಾಡುವಿ? ಇದನ್ನು ಕೇಳುವುದಕ್ಕಾಗಿ ಇಚ್ಛಿಸಿರುತ್ತೇನೆ. ನನ್ನ ಮುಂದೆ ಹೇಳು' ಎನ್ನಲು ರಾಜನು - 'ನಾನು ಪೂರ್ಣೈಶ್ವರ್ಯಾದಿ ಷಡ್ಗುಣಪೂರ್ಣನಾದ ಶ್ರೀಸತ್ಯನಾರಾಯಣನನ್ನು ಸಂತಾನಾದಿ ಐಶ್ವರ್ಯಪ್ರಾಪ್ತಿ ಕಾಮನೆಯಿಂದ ಪೂಜಿಸುತ್ತಿರುವೆನು' ಎಂದನು. ಆ ಮಾತು ಕೇಳಿ, ವ್ಯಾಪಾರಿಯು, 'ರಾಜನ್! ಈ ವ್ರತವನ್ನು ಹೇಗೆ ಮಾಡಬೇಕೆಂಬುದನ್ನು ಸವಿಸ್ತಾರವಾಗಿ ಹೇಳು. ನನಗೆ ಸಂತತಿ ಇಲ್ಲ,

ಈ ವ್ರತದಿಂದ ಸಂತತಿಯಾಗತಕ್ಕದ್ದು ನಿಜವಾದರೆ, ನಾನು ಈ ವ್ರತವನ್ನು ಮಾಡುತ್ತೇನೆ' ಎಂದು ಹೇಳಿ ರಾಜನ ಮೂಲಕ ವ್ರತದ ವಿಧಾನವನ್ನೆಲ್ಲ ಸವಿಸ್ತಾರವಾಗಿ ತಿಳಿದುಕೊಂಡು ಕೂಡಲೇ ಸಂತೋಷದಿಂದ ವ್ಯಾಪಾರಕ್ಕೆ ಹೋಗದೆ, ತನ್ನ ಮನೆಗೆ ಹಿಂತಿರುಗಿ ಬಂದು ತನ್ನ ಹೆಂಡತಿಯ ಮುಂದೆ ಸಂತತಿಯನ್ನು ಕೊಡುವಂಥ ಆ ವ್ರತವನ್ನು ತಿಳಿಸಿ, 'ಸ್ತ್ರೀಯೇ, ನನಗೆ ಸಂತತಿಯಾದ ನಂತರ ನಾನಾದರೂ ಈ ವ್ರತವನ್ನು ಮಾಡುವೆನು' ಎಂದು ಹೇಳಿ ಹೋದ ನಂತರ ಆತನ ಹೆಂಡತಿಯಾದ ಲೀಲಾವತಿಯು ಒಂದು ದಿನ ಪತಿಯಿಂದ ಕೂಡಿಕೊಂಡು ಸಂತೋಷದಿಂದ ಇರುತ್ತಿರಲು, ಶ್ರೀಸತ್ಯನಾರಾಯಣನ ಅನುಗ್ರಹದಿಂದ ಗರ್ಭಿಣಿಯಾದಳು. ಹತ್ತನೇ ತಿಂಗಳು ಬರಲು ಕನ್ಯಾರತ್ನವು ಹುಟ್ಟಿತು. ಆ ಕನ್ನಿಕೆಯು ಶುಕ್ಲಪಕ್ಷದ ಚಂದ್ರಮನಂತೆ ಬೆಳೆದಳು. ಆ ಕನ್ನಿಕೆಗೆ 'ಕಲಾವತಿ' ಎಂದು ಹೆಸರಿಟ್ಟರು. ಕೆಲವು ದಿವಸಗಳು ಹೋದ ನಂತರ ಲೀಲಾವತಿಯು ತನ್ನ ಪತಿಯನ್ನು ಕುರಿತು ಸ್ವಾಮಿಯೇ! ನೀವು ಪೂರ್ವದಲ್ಲಿ ಸಂಕಲ್ಪಿಸಿದ ವ್ರತವನ್ನು ಮಗಳು ಹುಟ್ಟಿ ಇಷ್ಟು ದೊಡ್ಡವಳಾದರೂ ಇದುವರೆಗೆ ಏಕೆ ಮಾಡಲಿಲ್ಲ? ಎಂದು ಕೇಳಲು, ಆ ಮಾತಿಗೆ ವ್ಯಾಪಾರಿಯು 'ಸ್ತ್ರೀಯೇ, ಈ ನನ್ನ ಮಗಳ ಲಗ್ನದ ಕಾಲಕ್ಕೆ ಆ ವ್ರತವನ್ನು ನಾನು ಮಾಡುವೆನು' ಎಂದು ಹೇಳಿದನು. ಹೀಗೆ ಹೆಂಡತಿಯನ್ನು ಸಮಾಧಾನ ಮಾಡಿ, ತಾನು ತನ್ನ ಕಾರ್ಯದ ನಿಮಿತ್ತ ಪರ ಊರಿಗೆ ಹೋದನು. ಕಲಾವತಿಯೆಂಬ ಕನ್ನಿಕೆಯಾದರೂ ತನ್ನ ತಂದೆಯ ಮನೆಯಲ್ಲಿ ದಿನೇ ದಿನೇ ಬೆಳೆದಳು. ಒಂದು ದಿವಸ ವ್ಯಾಪಾರಿಯು ಊರಿನಲ್ಲಿ ತನ್ನ ಗೆಳತಿಯರಿಂದ ಕೂಡಿ ಆಡುತ್ತಿರುವ ತನ್ನ ಮಗಳನ್ನು ನೋಡಿ, ಇನ್ನು ನನ್ನ ಮಗಳು ಲಗ್ನಕ್ಕೆ ಯೋಗ್ಯಳಾಗಿರುವಳೆಂದು ವಿಚಾರಿಸಿ, ಕೂಡಲೇ ಒಬ್ಬ ದೂತನನ್ನು ಕರೆದು, 'ನನ್ನ ಮಗಳ ಲಗ್ನಕ್ಕಾಗಿ ಯೋಗ್ಯವಾದ ಉತ್ತಮವಾದ ವರನನ್ನು ವಿಚಾರಿಸಿಕೊಂಡು ಬಾ' ಎಂದು ಆಜ್ಞಾಪಿಸಲು, ದೂತನು ಅಲೆಯುತ್ತಾ ಕಾಂಚನವೆಂಬ ಪಟ್ಟಣಕ್ಕೆ ಹೋದನು. ಅಲ್ಲಿ ಒಬ್ಬ ವೈಶ್ಯನ ಮಗನನ್ನು ನೋಡಿ, ಆತನನ್ನು ಕರೆದುಕೊಂಡು ಬಂದು ವ್ಯಾಪಾರಿಗೆ ತೋರಿಸಲು, ವ್ಯಾಪಾರಿಯು ಎಲ್ಲ ಗುಣಗಳಿಂದ ಪೂರ್ಣನೂ, ಸುಂದರನೂ ಆದ ಆ ವಣಿಕ್ಪುತ್ರನನ್ನು ನೋಡಿ, ಸಂತೋಷದಿಂದ ತನ್ನ ಜ್ಞಾತಿಗಳಿಂದಲೂ ಮತ್ತು ಬಾಂಧವರಿಂದಲೂ ಯುಕ್ತನಾಗಿ ತನ್ನ ಮಗಳನ್ನು ವಿಧ್ಯುಕ್ತ ಮಾರ್ಗದಿಂದ ಆ ವಣಿಕ್ಪುತ್ರನಿಗೆ ವಿವಾಹ ಮಾಡಿಕೊಟ್ಟನು. ಮನೆಯಲ್ಲಿ ಭಾಗ್ಯವು ಹೆಚ್ಚಾಗುತ್ತಾ ನಡೆಯಲು ಆ ಐಶ್ವರ್ಯದ ಮದದಿಂದ ವ್ಯಾಪಾರಿಯು ಮಗಳ ವಿವಾಹಕಾಲದಲ್ಲಿಯೂ ಸಹ ಶ್ರೀಸತ್ಯನಾರಾಯಣನವ್ರತ ಮಾಡುವುದನ್ನು ಮರೆತುಬಿಟ್ಟನು. ಅದರಿಂದ ಶ್ರೀಸತ್ಯನಾರಾಯಣನಿಗೆ ಸಿಟ್ಟು ಬಂದಿತು. ಮುಂದೆ ಕೆಲವು ಕಾಲದ ನಂತರ ತನ್ನ ವ್ಯವಹಾರ ಕಾರ್ಯದಲ್ಲಿ ಅತಿ ಕುಶಲನಾದ ವ್ಯಾಪಾರಿಯು ವ್ಯಾಪಾರ ಮಾಡುವುದಕ್ಕಾಗಿ ತನ್ನ ಅಳಿಯನೊಡನೆ ಸಮುದ್ರ ತೀರದಲ್ಲಿರುವ ರತ್ನಸಾರ ಪಟ್ಟಣದಲ್ಲಿ ಹೋಗಿ, ಕೆಲವು ದಿನಗಳವರೆಗೆ ವ್ಯಾಪಾರವನ್ನು ಮಾಡಿದನು. ನಂತರ ವ್ಯಾಪಾರಿ ಮತ್ತು ಅವನ ಅಳಿಯ ಇಬ್ಬರೂ ಅಲ್ಲಿಂದ ಹೊರಟು, ಅತಿ ಮನೋಹರವಾದ ಚಂದ್ರಕೇತು

ಎಂಬ ರಾಜನ ರಾಜಧಾನಿಯಲ್ಲಿ ವ್ಯಾಪಾರಾರ್ಥವಾಗಿ ಬಂದರು. ಅಷ್ಟರಲ್ಲಿ ಸಮರ್ಥನಾದ ಶ್ರೀಸತ್ಯನಾರಾಯಣನು, ವ್ರತವನ್ನು ಮಾಡುವುದಾಗಿ ನಿಶ್ಚಯಿಸಿದ್ದ ವ್ಯಾಪಾರಿಯು ಈವರೆಗೂ ವ್ರತವನ್ನು ಮಾಡದೇ ಇರುವುದರಿಂದ ತನ್ನ ಮಹಾತ್ಮೆಯನ್ನು ತೋರಿಸುವುದಕ್ಕೋಸ್ಕರ 'ವ್ಯಾಪಾರಿಯೇ, ನೀನು ಪ್ರತಿಜ್ಞಾಭ್ರಷ್ಟನಾದ ಪ್ರಯುಕ್ತ ಅತಿ ಭಯಂಕರವಾದ ಮತ್ತು ಕಠಿಣವಾಗಿಯೂ ಇರುವ ದುಃಖಸಮುದ್ರದಲ್ಲಿ ಮುಳುಗು' ಎಂದು ಶಾಪ ಕೊಟ್ಟನು. ಮುಂದೆ ಕೆಲವು ದಿವಸಗಳ ನಂತರ, ಚಂದ್ರಕೇತು ರಾಜನ ದ್ರವ್ಯವನ್ನು ಒಬ್ಬ ಕಳ್ಳನು ತೆಗೆದುಕೊಂಡು ವ್ಯಾಪಾರಿ ಮತ್ತು ಅವನ ಅಳಿಯನು ಇಬ್ಬರೂ ಕುಳಿತಿರುವ ಜಾಗದ ಬಳಿ ಬಂದನು. ಅಷ್ಟರಲ್ಲಿ ಆ ಕಳ್ಳನನ್ನು ಹಿಡಿಯುವುದಕ್ಕಾಗಿ ಅವನ ಹಿಂದಿನಿಂದಲೇ ರಾಜಭಟರು ಓಡುತ್ತ ಬರುತ್ತಿರಲು ಆ ಕಳ್ಳನು ಅಂಜಿ, ಆ ರಾಜದ್ರವ್ಯವನ್ನು ಅಲ್ಲಿಯೇ ಇಟ್ಟು ತಾನು ಶೀಘ್ರವಾಗಿ ಅಡಗಿಕೊಂಡನು. ರಾಜಭಟರು ವ್ಯಾಪಾರಿಯಿದ್ದ ಸ್ಥಳದಲ್ಲಿ ಬಂದು ಅವರ ಸಮೀಪದಲ್ಲಿಯೇ ಇರುವಂತಹ ರಾಜದ್ರವ್ಯವನ್ನು ನೋಡಿ, ಇವರೇ ಕಳ್ಳರಿರಬೇಕೆಂದು ತಿಳಿದು, ಕೂಡಲೇ ಆ ಇಬ್ಬರನ್ನೂ ಸೆರೆಹಿಡಿದು ರಾಜನ ಹತ್ತಿರ ತಂದು, ಸಂತೋಷದಿಂದ ರಾಜನೇ, ಇಬ್ಬರೂ ಕಳ್ಳರನ್ನು ಹಿಡಿದು ತಂದಿರುವೆವು. ಇವರಿಗೆ ಯಾವ ಶಿಕ್ಷೆಯನ್ನು ಕೊಡಬೇಕು ಎಂಬುದಾಗಿ ಚೆನ್ನಾಗಿ ವಿಚಾರಿಸಿ ನೋಡಿ, ನಮಗೆ ಅಪ್ಪಣೆಯನ್ನು ಕೊಡಬೇಕೆಂದು ಪ್ರಾರ್ಥಿಸಿದರು. ಬಳಿಕ ಅವರ ವಿಷಯಕ್ಕೆ ಏನೂ ವಿಚಾರ ಮಾಡದಲೇ ರಾಜಾಜ್ಞೆಯ ಮೇರೆಗೆ ಆ ಇಬ್ಬರನ್ನೂ ಮಹಾ ಕಠಿಣವಾದ ದುರ್ಗದಲ್ಲಿರುವ ಒಂದು ಬಂದೀಖಾನೆಯಲ್ಲಿ ಸೆರೆಯಿಟ್ಟರು. ವ್ಯಾಪಾರಿ ಹಾಗೂ ಅವನ ಅಳಿಯ ತಾವು ಕಳ್ಳರಲ್ಲವೆಂದು ಎಷ್ಟು ಬಾರಿ ಕೇಳಿಕೊಂಡರೂ ಶ್ರೀಸತ್ಯನಾರಾಯಣನ ಮಾಯೆಯಿಂದ ಅವರ ಕಡೆಗೆ ಯಾರೂ ಲಕ್ಷ್ಯ ಕೊಡಲಿಲ್ಲ ಮತ್ತು ಅವರ ದ್ರವ್ಯವನ್ನು ಚಂದ್ರಕೇತು ರಾಜನು ತನ್ನ ಖಜಾನೆಯಲ್ಲಿ ಹಾಕಿಕೊಂಡನು. ಶ್ರೀಸತ್ಯನಾರಾಯಣನು ಅವಕೃಪೆ ಮಾಡಿದುದರಿಂದ ಮನೆಯಲ್ಲಿ ವ್ಯಾಪಾರಿಯ ಹೆಂಡತಿ ಮತ್ತು ಮಗಳು ದುಃಖದಲ್ಲಿ ಮುಳುಗಿದರು. ಮನೆಯಲ್ಲಿದ್ದ ಐಶ್ವರ್ಯವನ್ನೆಲ್ಲ ಕಳ್ಳರು ಅಪಹರಿಸಿಕೊಂಡು ಹೋದರು. ಆದ್ದರಿಂದ ವ್ಯಾಪಾರಿಯ ಹೆಂಡತಿಯು ಮನಸ್ತಾಪದಿಂದಲೂ, ಮೈಯಲ್ಲಿ ಸರಿಯಿಲ್ಲದಿರುವುದರಿಂದಲೂ ದ್ರವ್ಯವೆಲ್ಲಾ ಕಳುವಾಗಿ ಹೋದುದರಿಂದ ಸಕಾಲಕ್ಕೆ ಆಹಾರವೂ ಸಹ ಸಿಗದಂತಾಗಲು ಹಸಿವೆ-ನೀರಡಿಕೆಗಳಿಂದ ಪೀಡಿತಳಾಗಿ, ಇನ್ನು ನನಗೆ ಅನ್ನವಾದರೂ ಹೇಗೆ ಸಿಕ್ಕೀತೆಂದು ಮನೆ-ಮನೆಗಳಲ್ಲಿ ಭಿಕ್ಷೆ ಬೇಡುತ್ತಿದ್ದಳು. ಕಲಾವತಿ ಎಂಬ ಮಗಳಾದರೂ ನಿತ್ಯದಲ್ಲಿ ಭಿಕ್ಷಾರ್ಥವಾಗಿ ಮನೆ-ಮಠ ತಿರುಗಹತ್ತಿದಳು. ಒಂದು ದಿನ ಕಲಾವತಿಯು ತನಗೆ ಬಹಳ ಹಸಿವಾದುದರಿಂದ ಒಬ್ಬ ಬ್ರಾಹ್ಮಣನ ಮನೆಗೆ ಹೋಗಿ ಅಲ್ಲಿ ಆ ಬ್ರಾಹ್ಮಣನು ಮಾಡುತ್ತಿರುವ ಶ್ರೀಸತ್ಯನಾರಾಯಣನ ವ್ರತವನ್ನು ನೋಡಿ, ಅಲ್ಲಿಯೇ ಸ್ವಲ್ಪ ಹೊತ್ತು ಕುಳಿತು, ಕಥೆಯನ್ನು ಕೇಳಿ ಶ್ರೀಸತ್ಯನಾರಾಯಣನನ್ನು ಮನಸ್ಸಿನಿಂದ ಪ್ರಾರ್ಥಿಸಿ, ಪ್ರಸಾದವನ್ನು ಸ್ವೀಕರಿಸಿ, ಕತ್ತಲಾದುದರಿಂದ ಮನೆಗೆ ಹೊರಟು ಬಂದಳು. ಲೀಲಾವತಿಯು ಮಗಳನ್ನು ನೋಡಿ,

‘ಪ್ರೇಮದಿಂದ ಮಗಳೇ, ಇಷ್ಟು ರಾತ್ರಿಯಾಗುವವರೆಗೆ ನೀನು ಎಲ್ಲಿ ಕುಳಿತಿದ್ದೀ? ನಿನ್ನ ಮನಸ್ಸಿನಲ್ಲೇನಿರುವುದು?’ ಎಂದು ಕೇಳಲು ಆ ಮಾತಿಗೆ ಕಲಾವತಿಯು - ‘ತಾಯೀ, ಬ್ರಾಹ್ಮಣನ ಮನೆಯಲ್ಲಿ ಮನಸ್ಸಿನಲ್ಲಿ ಬೇಡಿದ ಇಷ್ಟಾರ್ಥವನ್ನು ಪೂರ್ಣಮಾಡಿಕೊಡುವಂತಹ ಒಂದು ವ್ರತವನ್ನು ಮಾಡುತ್ತಿದ್ದರು. ಅದನ್ನು ನಾನು ನೋಡುತ್ತ ಅಲ್ಲಿಯೇ ಸ್ವಲ್ಪಹೊತ್ತು ಕುಳಿತುಕೊಂಡಿದ್ದೆ’ ಎಂದಳು. ಆ ಮಾತು ಕೇಳಿ ಲೀಲಾವತಿಯು ಸಂತೋಷದಿಂದ ತಾನೂ ಬಂಧು-ಬಾಂಧವರಿಂದಲೂ ಮತ್ತು ಜ್ಞಾತಿಜನರೊಡನೆ ಭಕ್ತಿಯಿಂದ ಶ್ರೀಸತ್ಯನಾರಾಯಣ-ವ್ರತವನ್ನು ಮಾಡಿ, ‘ಸ್ವಾಮಿನ್! ಶ್ರೀಸತ್ಯನಾರಾಯಣನೇ, ನನ್ನ ಗಂಡನೂ ಮತ್ತು ಅಳಿಯನೂ ಶೀಘ್ರವಾಗಿ ಮನೆಗೆ ಬರಲಿ. ಅವರು ನಿನಗೆ ಮಾಡಿದ ಅಪರಾಧವನ್ನು ಕ್ಷಮಿಸೆಂದು ಬೇಡಿಕೊಂಡಳು.’ ಲೀಲಾವತಿಯು ಮಾಡಿದ ವ್ರತದಿಂದ ಸಂತುಷ್ಟನಾದ ಶ್ರೀಸತ್ಯನಾರಾಯಣನು ಕೂಡಲೇ ಚಂದ್ರಕೇತು ರಾಜನ ಸ್ವಪ್ನದಲ್ಲಿ ಹೋಗಿ, ‘ರಾಜನೇ, ನೀನು ಕಾರಾಗೃಹದಲ್ಲಿಟ್ಟ ಇಬ್ಬರು ವ್ಯಾಪಾರಿಗಳನ್ನು ಪ್ರಾತಃಕಾಲವಾದ ಕೂಡಲೇ ಬಂದಿಯಿಂದ ಮುಕ್ತರನ್ನಾಗಿ ಮಾಡು. ನೀನು ತೆಗೆದುಕೊಂಡಂತಹ ಅವರ ದ್ರವ್ಯವನ್ನಾದರೂ ಅವರಿಗೆ ಕೊಡು. ಹೀಗೆ ನೀನು ಮಾಡದೇ ಇದ್ದರೆ ರಾಜ್ಯ ಐಶ್ವರ್ಯ, ಮಕ್ಕಳುಗಳಿಂದ ಯುಕ್ತನಾದ ನಿನ್ನನ್ನು ನಾನು ನಾಶಮಾಡಿಬಿಡುವೆನು’ ಎಂದು ರಾಜನಿಗೆ ಹೇಳಿ, ಶ್ರೀಸತ್ಯನಾರಾಯಣನು ಅದೃಶ್ಯನಾದನು. ಅನಂತರ ರಾಜನು ಪ್ರಾತಃಕಾಲದಲ್ಲಿ ಎದ್ದು ತನ್ನ ಸ್ವಜನರಿಂದ ಕೂಡಿ ಸಭೆಯಲ್ಲಿ ಬಂದು ಎಲ್ಲರಿಗೂ ಸ್ವಪ್ನದಲ್ಲಿ ಕಂಡ ವಿಷಯವನ್ನು ತಿಳಿಸಿ, ಕಾರಾಗೃಹದಲ್ಲಿ ಇರುವ ಇಬ್ಬರು ವೈಶ್ಯರನ್ನು ಬಂಧನದಿಂದ ಮುಕ್ತರನ್ನಾಗಿ ಮಾಡಿರೆಂದು ಭಟರಿಗೆ ಆಜ್ಞಾಪಿಸಿದನು. ಕೂಡಲೇ ಅವರು ರಾಜಾಜ್ಞೆಯ ಮೇರೆಗೆ ಆ ಇಬ್ಬರು ವ್ಯಾಪಾರಿಗಳನ್ನು ತಂದು ನಿಲ್ಲಿಸಿ, ಅತಿ ವಿನಯದಿಂದ ‘ರಾಜನೇ, ತಮ್ಮ ಅಪ್ಪಣೆಯ ಪ್ರಕಾರ ಇಬ್ಬರು ವ್ಯಾಪಾರಿಗಳನ್ನು ಬಂಧನದಿಂದ ಮುಕ್ತಗೊಳಿಸುತ್ತಿದ್ದೇವೆ’ ಎಂದರು. ಆ ವ್ಯಾಪಾರಿಗಳು ರಾಜಶ್ರೇಷ್ಠನಾದ ಚಂದ್ರಕೇತುವನ್ನು ನೋಡಿ ಆತನಿಗೆ ನಮಸ್ಕರಿಸಿ, ತಮ್ಮ ಹಿಂದಿನ ವೃತ್ತಾಂತವನ್ನೆಲ್ಲ ಸ್ಮರಣೆ ಮಾಡಿ, ಭಯದಿಂದ ಪುನಃ ಏನೂ ಮಾತುಗಳನ್ನಾಡದೇ ಸುಮ್ಮನೇ ನಿಂತುಕೊಂಡರು. ಬಳಿಕ ರಾಜನು ಆ ಇಬ್ಬರು ವ್ಯಾಪಾರಿಗಳನ್ನು ನೋಡಿ, ಅತ್ಯಾದರದಿಂದ ‘ಏನೋ ನಿಮ್ಮ ದುರ್ದೈವದಿಂದಲೇ ಇಂಥ ದುಃಖವನ್ನು ನೀವು ಅನುಭವಿಸಬೇಕಾಯಿತು. ಇನ್ನು ಮುಂದೆ ನಿಮಗೆ ಯಾವ ಭಯವೂ ಇಲ್ಲ’ ಎಂದು ಹೇಳಿ ಅವ ದ್ರವ್ಯವನ್ನು ಅವರಿಗೆ ಇಮ್ಮಡಿ ಮಾಡಿ ಕೊಟ್ಟು ಕಳುಹಿಸಿದನು.

॥ ಇಲ್ಲಿಗೆ ಸ್ಕಾಂದಪುರಾಣದ ರೇವಾಕಾಂಡದಲ್ಲಿ
ಶ್ರೀಸತ್ಯನಾರಾಯಣಕಥೆಯ ತೃತೀಯ ಅಧ್ಯಾಯವು ಮುಗಿಯಿತು ॥

ಸೂತರು ಹೇಳಿದರು - ಅನಂತರ ವ್ಯಾಪಾರಿಯು ಬ್ರಾಹ್ಮಣನಿಗೆ ದಾನವನ್ನು ನೀಡಿ ತನ್ನ ಊರಿಗೆ ಹೊರಟನು. ಶ್ರೀಸತ್ಯನಾರಾಯಣನು ವ್ಯಾಪಾರಿಯನ್ನು ಪರೀಕ್ಷಿಸಲು ಸನ್ಯಾಸಿಯ ವೇಷವನ್ನು ಧರಿಸಿ ಬಂದು, ‘ವ್ಯಾಪಾರೀ, ಈ ಹಡಗಿನಲ್ಲಿ ನೀನು ಏನನ್ನು

ತುಂಬಿರುವಿ?' ಎಂದು ಕೇಳಿದನು. ಆ ಮಾತು ಕೇಳಿ, ಮದೋನ್ಮತ್ತರಾದ ಆ ವ್ಯಾಪಾರಿಗಳು ಸೊಕ್ಕಿನಿಂದ, ದೊಡ್ಡ ಧ್ವನಿಯಿಂದ ನಕ್ಕು, ಆ ಸನ್ಯಾಸಿಯನ್ನು ಕುರಿತು - 'ಎಲೈ ಸನ್ಯಾಸಿಯೇ, ನೀನು ಅದನ್ನೆಲ್ಲ ಕೇಳಿ ಏನು ಮಾಡುವಿ, ಇದರಲ್ಲಿರುವ ಹಣವನ್ನೆಲ್ಲ ಅಪಹರಿಸಬೇಕೆಂದು ಇಚ್ಛಿಸಿರುವೆಯಾ ಹೇಗೆ? ನಾವು ಇದರಲ್ಲಿ ಹಣವನ್ನು ಹಾಕಿ ತುಂಬದೆ, ಕೇವಲ ಎಲೆ-ಬಳ್ಳಿಗಳಿಂದ ಮಾತ್ರ ಈ ಹಡಗನ್ನು ತುಂಬಿರುತ್ತೇವೆ' ಎಂದು ನುಡಿದರು. ಅವರ ಅತಿ ನಿಷ್ಠುರವಾದ ಅಂತಹ ಮಾತುಗಳನ್ನು ಕೇಳಿ, 'ಒಳ್ಳೆಯದು! ನೀವು ನುಡಿದದ್ದೇ ಸತ್ಯವಾಗಲಿ' ಎಂದು ಹೇಳಿ, ಆ ಸನ್ಯಾಸಿಯು ಅಲ್ಲಿಂದ ಹೊರಟು ಸ್ವಲ್ಪ ದೂರದಲ್ಲಿ ಹೋಗಿ, ಅಲ್ಲಿಯೇ ಸಮುದ್ರದ ದಡೆಯಲ್ಲಿ ಕುಳಿತುಕೊಂಡನು. ಆ ಸನ್ಯಾಸಿಯು ಹೋದನಂತರ ವ್ಯಾಪಾರಿಯುತ್ತಾನು ತನ್ನ ನಿತ್ಯ ಕ್ರಿಯೆಗಳನ್ನೆಲ್ಲಾ ತೀರಿಸಿಕೊಂಡು ದಂಡೆಯಲ್ಲಿ ಬಂದು ನಿಂತಿರುವ ಹಡಗನ್ನು ನೋಡಿ, ಆ ಹಡಗಿನ ಹತ್ತಿರ ಹೋಗಿ ನೋಡುವಷ್ಟರಲ್ಲಿ ಹಣವು ಅಲ್ಲಿ ಇಲ್ಲದಂತಾಗಿ, ಕೇವಲ ಎಲೆ-ಬಳ್ಳಿಗಳಿಂದಲೇ ತುಂಬಿರುವುದನ್ನು ಕಂಡು ಆಶ್ಚರ್ಯದಿಂದಲೂ, ಭಯದಿಂದಲೂ ಮೂರ್ಛೆ ಹೋದನು. ಕೆಲವು ಕಾಲದ ನಂತರ ಎಚ್ಚರ ಬಂದು ಚಿಂತೆಯಿಂದ ಕುಳಿತಿರಲು, ಅಳಿಯನು ಮಾವನನ್ನು ನೋಡಿ, 'ನೀವು ಹೀಗೆ ದುಃಖಪಡಲು ಕಾರಣವೇನು? ನಮಗೆ ಆ ಸನ್ಯಾಸಿಯು ಶಾಪವನ್ನು ಕೊಟ್ಟನು. ಕಾರಣ, ಆ ಸನ್ಯಾಸಿಗೆ ನಾವು ಶರಣು ಹೋಗಲು ಆತನು ನಮ್ಮ ಬದುಕನ್ನೆಲ್ಲ ನಮಗೆ ಮೊದಲು ಇದ್ದಂತೆ ಮಾಡಿಕೊಡುವನು ಮತ್ತು ನಮ್ಮ ಕಾರ್ಯವು ಆಗುವುದು. ಪ್ರಯುಕ್ತ, ಆತನಿಗೆ ನಾವು ಶರಣು ಹೋಗತಕ್ಕದ್ದೇ ಯೋಗ್ಯವಿರುತ್ತದೆ' ಎಂದು ಹೇಳಲು, ಅಳಿಯನ ಮಾತು ಕೇಳಿ, ವ್ಯಾಪಾರಿಯು ಕೂಡಲೇ ಆ ಸನ್ಯಾಸಿಯ ಹತ್ತಿರದಲ್ಲಿ ಬಂದು ಆತನನ್ನು ನೋಡಿ, ಭಕ್ತಿಯಿಂದ ನಮಸ್ಕರಿಸಿ, ಆದರಪೂರ್ವಕವಾಗಿ ಕೈಗಳನ್ನು ಮುಗಿದು, 'ಎಲೈ ಸನ್ಯಾಸಿಯೇ! ನಿನಗೆ ನಾನು ಬಹಳೇ ಕೆಟ್ಟ ಮಾತುಗಳನ್ನು ಆಡಿದೆನು. ಕಾರಣ, ನನ್ನ ಅಪರಾಧಗಳನ್ನೆಲ್ಲ ಕ್ಷಮಿಸಬೇಕು' ಎಂದು ಅತಿವಿನಯದಿಂದ ಪ್ರಾರ್ಥಿಸಿ, ಮೇಲಿಂದ ಮೇಲೆ ಆತನಿಗೆ ನಮಸ್ಕರಿಸಿ, ಬಹಳೇ ದುಃಖದಿಂದ ನಿಲ್ಲಲು, ಅವನನ್ನು ನೋಡಿ ಸನ್ಯಾಸಿಯು, 'ನನ್ನ ಪೂಜೆಯನ್ನು ಮಾಡದಿರುವಂತಹ ವ್ಯಾಪಾರೀ, ನೀನು ವ್ಯರ್ಥವಾಗಿ ದುಃಖ ಮಾಡಬೇಡ, ನನ್ನ ಮಾತುಗಳನ್ನು ಕೇಳು. ದುರ್ಬುದ್ಧಿಯೇ! ನನ್ನ ಅಪ್ಪಣೆಯಿಂದಲೇ ಈ ಬಗೆಯಾಗಿ ನೀನು ದುಃಖಗಳನ್ನು ಅನುಭವಿಸಬೇಕಾಯಿತು' ಎಂದು ಹೇಳಲು. ಆ ಮಾತು ಕೇಳಿ ವ್ಯಾಪಾರಿಯು ಆತನನ್ನು ಸ್ತೋತ್ರ ಮಾಡುವುದಕ್ಕೆ ಉದ್ಯುಕ್ತನಾದನು. ಹೇಗೆಂದರೆ - 'ಎಲೈ ಭಗವನ್! ನಿನ್ನ ಮಾಯೆಯಿಂದ ಬ್ರಹ್ಮನೇ ಮೊದಲಾದ ಎಲ್ಲ ದೇವತೆಗಳೂ ಮೋಹಿತರಾಗಿ, ನಿನ್ನ ಬಹಳ ಆಶ್ಚರ್ಯಕಾರಕ ಗುಣ, ರೂಪ, ಕ್ರಿಯೆಗಳನ್ನು ತಿಳಿಯುವುದಕ್ಕೆ ಸಮರ್ಥರಾಗುವುದಿಲ್ಲವೆಂದ ಮೇಲೆ ನಾನಂತೂ ಮನುಷ್ಯನಿದ್ದೇನೆ. ನಿನ್ನ ಮಾಯೆಯಿಂದ ತೀರ ಮೋಹಿತನಾಗಿ ಮೂಢನಿರುವನೆಂದ ಮೇಲೆ ನಿನ್ನ ವಿಷಯಕವಾದ ಜ್ಞಾನವು ನನಗೆ ಹೇಗಾದೀತು? ಭಗವನ್! ನಾನು ಮಹಾಮೂಢನು. ನನ್ನಲ್ಲಿ ಅನುಗ್ರಹ ಮಾಡು. ಇನ್ನು

ನಾನು ನನ್ನ ಐಶ್ವರ್ಯಾನುಸಾರ ನಿನ್ನನ್ನು ಪೂಜಿಸುವೆನು. ನನ್ನ ದ್ರವ್ಯವನ್ನು ಮೊದಲಿನಂತೆಯೇ ನನಗೆ ಮಾಡಿಕೊಟ್ಟು, ಶರಣು ಬಂದಂಥ ನನ್ನನ್ನು ಭಕ್ತವತ್ಸಲನಾದ ನೀನು ರಕ್ಷಣೆ ಮಾಡು' ಎಂದು ಅತಿ ದೈನ್ಯದಿಂದ ಭಕ್ತಿಪೂರ್ವಕ ಪ್ರಾರ್ಥಿಸುವ ವ್ಯಾಪಾರಿಯ ಸ್ತೋತ್ರವನ್ನು ಕೇಳಿ, ಶ್ರೀಸತ್ಯನಾರಾಯಣನು ಅತಿ ಸಂತುಷ್ಟನಾಗಿ ಆತನು ಬೇಡಿದ ವರವನ್ನು ಕೊಟ್ಟು ಅಲ್ಲಿಯೇ ಅದೃಶ್ಯನಾದನು. ಆಗ ವ್ಯಾಪಾರಿಯು ಹಡಗಿನ ಬಳಿಗೆ ಬಂದು, ಅದರಲ್ಲಿ ತುಂಬಿರುವ ತನ್ನ ದ್ರವ್ಯವನ್ನೆಲ್ಲ ನೋಡಿ, ಶ್ರೀಸತ್ಯನಾರಾಯಣನ ಅನುಗ್ರಹದಿಂದಲೇ ನನ್ನ ಮನೋರಥವು ಪೂರ್ಣವಾಯಿತೆಂದು ತಿಳಿದು ಕೂಡಲೇ ಅತಿ ಸಂಭ್ರಮದೊಡನೆ ಸ್ವಜನರಿಂದ ಕೂಡಿಕೊಂಡು, ವಿಧಾನಪೂರ್ವಕ ಶ್ರೀಸತ್ಯನಾರಾಯಣನ ಪೂಜೆಯನ್ನು ಮಾಡಿದನು. ಬಳಿಕ ಆತನ ಅನುಗ್ರಹದಿಂದ ಪೂರ್ಣನಾದ ವ್ಯಾಪಾರಿಯು, ತನ್ನ ಹಡಗಿನಲ್ಲಿ ಅಳಿಯನೊಡನೆ ಕುಳಿತು ತನ್ನ ದೇಶಕ್ಕೆ ಪ್ರಯಾಣ ಮಾಡಿದನು. ಸ್ವಲ್ಪ ದೂರ ಬಂದ ನಂತರ, ಅಳಿಯನನ್ನು ನೋಡಿ ವ್ಯಾಪಾರಿಯು - 'ಅಳಿಯನೇ, ನೋಡು ಇದೇ ನಮ್ಮ ರತ್ನಸಾರ ಪಟ್ಟಣವು' ಎಂದು ತೋರಿಸಿ, ಕೂಡಲೇ ತನ್ನ ದ್ರವ್ಯರಕ್ಷಕನಾದ ಭಟನನ್ನು ಕರೆದು, ತಾನು ಬಂದ ವರ್ತಮಾನವನ್ನು ತನ್ನ ಮನೆಯಲ್ಲಿ ತಿಳಿಸು ಎಂದು ಕಳುಹಿಸಿದನು. ಆ ಭಟನು ವ್ಯಾಪಾರಿಯ ಮನೆಗೆ ಹೋಗಿ ಆತನ ಪತ್ನಿ ಲೀಲಾವತಿಗೆ ವ್ಯಾಪಾರಿಯು ಹಾಗೂ ಆತನ ಅಳಿಯನು ಹಿಂತಿರುಗಿರುವ ವಿಷಯವನ್ನು ಅರುಹಿದನು. ಆ ಮಾತುಗಳನ್ನು ಕೇಳಿ, ಅತ್ಯಾನಂದದಿಂದ ಲೀಲಾವತಿಯು ಶ್ರೀಸತ್ಯನಾರಾಯಣನ ಪೂಜೆಯನ್ನು ಯಥಾವಿಧಿಯಿಂದ ಮಾಡಿ, ತನ್ನ ಮಗಳನ್ನು ಕುರಿತು 'ಮಗಳೇ ನಾನು ಪತಿಯ ದರ್ಶನಕ್ಕಾಗಿ ಹೋಗುವೆನು. ನೀನೂ ನನ್ನೊಡನೆ ಶೀಘ್ರವಾಗಿ ಬಾ' ಎನ್ನಲು, ತಾಯಿಯ ಮಾತನ್ನು ಕೇಳಿ, ಕಲಾವತಿಯು ತಾನು ಶ್ರೀಸತ್ಯನಾರಾಯಣನ ಪೂಜೆಯನ್ನು ಮಾಡಿ ಮುಗಿಸಿ, ಪ್ರಸಾದವನ್ನು ಸ್ವೀಕರಿಸಿದೇ ಅಲ್ಲಿ ಬಿಟ್ಟು ಆತುರದಿಂದ ತನ್ನ ಗಂಡನನ್ನು ನೋಡಲು ಹೊರಟಳು. ಅದರಿಂದ ಕೋಪಗೊಂಡ ಶ್ರೀಸತ್ಯನಾರಾಯಣನು ಅವಳ ಗಂಡನನ್ನು ಮತ್ತು ಆತನು ಕುಳಿತಂತಹ ಹಡಗನ್ನು ಹಾಗೂ ಅದರಲ್ಲಿರುವ ದ್ರವ್ಯ ಸಹಿತವಾಗಿ ನೀರಿನಲ್ಲಿ ಮುಳುಗಿಸಿದನು. ಕಲಾವತಿಯು ತನ್ನ ಗಂಡನನ್ನು ಕಾಣದಿರಲು ಅತಿ ದುಃಖದಿಂದ ಪರಿತಪಿಸಿದಳು. ಇಂಥ ದುಃಖಿತಳಾದ ಮಗಳನ್ನು ಮತ್ತು ನಾವು ನೀರಿನಲ್ಲಿ ಮುಳುಗುವುದನ್ನು ನೋಡಿ, ವ್ಯಾಪಾರಿಯು ಭಯಭೀತನಾಗಿ ಇದೇನಾಶ್ಚರ್ಯವೆಂದು ಚಿಂತಿಸಹತ್ತಿದನು. ಅದರಂತೆ ಅಂಬಿಗರೆಲ್ಲರೂ ಚಿಂತೆಯಿಂದ ಪೂರ್ಣರಾದರು. ಆಗ ಲೀಲಾವತಿಯು ತನ್ನ ಮಗಳ ಅವಸ್ಥೆಯನ್ನು ನೋಡಿ, ಕೇವಲ ಭ್ರಾಂತಳಾಗಿ ಬಹಳ ದುಃಖಿಸುತ್ತ ತನ್ನ ಪತಿಯನ್ನು ಕುರಿತು, 'ಈಗ ತಾನೇ ಹಡಗಿನಲ್ಲಿ ಕುಳಿತು ಬರುತ್ತಿದ್ದ ಅಳಿಯನು ಹೇಗೆ ಕಾಣೆಸದಾದನು? ಯಾವ ದೇವರ ಕ್ಷೋಭೆಯು ನಮ್ಮ ಮೇಲುಂಟಾಯಿತು? ಮತ್ತು ಹಡಗು ನೀರಿನಲ್ಲಿ ಹೇಗೆ ಮುಳುಗಿತು? ನನಗೆ ಏನೂ ತಿಳಿಯದಂತಾಗಿದೆ. ಹಾಗೂ ಶ್ರೀಸತ್ಯನಾರಾಯಣನ ಮಹಾತ್ಮೆಯನ್ನು ತಿಳಿಯಲು ಯಾರು ಸಮರ್ಥರಾಗುವರು' ಎಂದು ದುಃಖಿಸಿದಳು. ಅನಂತರ

ಲೀಲಾವತಿಯು ಮಗಳನ್ನು ಗಟ್ಟಿಯಾಗಿ ತನ್ನ ಎದೆಯಲ್ಲಿ ಅವಚಿಕೊಂಡು ಬಹುವಿಧವಾಗಿ ದುಃಖಿಸಿದಳು. ಕಲಾವತಿಯು ತನ್ನ ಗಂಡನು ಮರಣ ಹೊಂದಿದನೆಂದು ದುಃಖದಿಂದ ಪತಿಯೊಡನೆ ಸಹಗಮನ ಹೊಂದುವುದಾಗಿ ನಿರ್ಧರಿಸಿದಳು. ಮಗಳು ಮಾಡಿದ ನಿಧಾರವನ್ನು ಹೆಂಡತಿಯಿಂದ ತಿಳಿದ ವ್ಯಾಪಾರಿಯು, ದುಃಖದಿಂದ ಬಹಳ ಸಂತಪ್ತನಾಗಿ ತನ್ನ ಮನಸ್ಸಿನಲ್ಲಿಯೇ ವಿಚಾರಿಸಿ, ಈ ನನ್ನ ಅಳಿಯನನ್ನು ಶ್ರೀಸತ್ಯನಾರಾಯಣನೇ ನೀರಿನಲ್ಲಿ ಮುಳುಗಿಸಿದನೋ ಅಥವಾ ಆತನ ಮಾಯೆಯಿಂದ ನಾನೇ ಭ್ರಾಂತನಾಗಿರುವೆನೋ ತಿಳಿಯದು. ಇನ್ನು ನಾನು ಶ್ರೀಸತ್ಯನಾರಾಯಣನನ್ನೇ ನನ್ನ ಐಶ್ವರ್ಯಾನುಸಾರ ಪೂಜಿಸುವೆನೆಂದು ನಿಶ್ಚಯಿಸಿ, ತನ್ನ ಮನಸ್ಸಿನಲ್ಲಿದ್ದುದನ್ನು ಎಲ್ಲರಿಗೂ ಕರೆದು ಅವರಿಗೆ ತಿಳಿಸಿ ಶ್ರೀಸತ್ಯನಾರಾಯಣನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದಾಗ ಅದರಿಂದ ಸಂತುಷ್ಟನಾದ ಶ್ರೀಸತ್ಯನಾರಾಯಣನು 'ವ್ಯಾಪಾರಿಯೇ, ನಿನ್ನ ಮಗಳು ನನ್ನ ಪ್ರಸಾದವನ್ನು ಸ್ವೀಕರಿಸದೇ ಬಂದಿರುವುದರಿಂದ ಅವಳ ಗಂಡನು ಅದೃಶ್ಯನಾಗಿರುವನು. ಅವಳು ಮನೆಗೆ ಹೋಗಿ, ಕ್ಷಮೆಯನ್ನು ಬೇಡಿ, ಪ್ರಸಾದವನ್ನು ಸ್ವೀಕರಿಸಿ ಬಂದರೆ ಪುನಃ ಪತಿಯನ್ನು ಹೊಂದುವಳು' ಎಂಬ ಆಕಾಶವಾಣಿಯ ರೂಪದಲ್ಲಿ ನುಡಿದಾಗ, ಕಲಾವತಿಯು ಶೀಘ್ರವಾಗಿ ಮನೆಗೆ ಹೋಗಿ ಪ್ರಸಾದವನ್ನು ಸ್ವೀಕರಿಸಿ, ಪುನಃ ತಿರುಗಿ ಬಂದು ಎಲ್ಲರೊಡನೆ ಇರುವ ತನ್ನ ಪತಿಯನ್ನು ನೋಡಿ ಸಂತೋಷಗೊಂಡಳು. ನಂತರ, 'ತಂದೆಯೇ, ಮನೆಗೆ ಹೋಗೋಣ. ತಡವೇಕೆ?' ಎಂದು ನುಡಿದಾಗ, ಮಗಳ ಮಾತನ್ನು ಕೇಳಿ, ಸಂತೋಷ ಹೊಂದಿದ ವ್ಯಾಪಾರಿಯು ನದಿಯ ತೀರದಲ್ಲೇ ಶ್ರೀಸತ್ಯನಾರಾಯಣನ ಪೂಜೆಯನ್ನು ಬಂಧು-ಬಾಂಧವರಿಂದ ಕೂಡಿಕೊಂಡು ಮಾಡಿ, ದ್ರವ್ಯಸಹಿತನಾಗಿ ಮನೆಗೆ ಬಂದನು. ಈ ವ್ಯಾಪಾರಿಯು ಪ್ರತಿ ಪೌರ್ಣಮಾ, ಅಮಾವಾಸ್ಯೆ, ಸಂಕ್ರಮಣ ಮುಂತಾದ ದಿನಗಳಲ್ಲಿ ಶ್ರೀಸತ್ಯನಾರಾಯಣನನ್ನು ಪೂಜಿಸಿ, ಆ ದೇವನ ಅನುಗ್ರಹದಿಂದ ಇಹಲೋಕದ ಸುಖಗಳನ್ನನುಭವಿಸಿ, ಜೀವಿತಾಂತದಲ್ಲಿ ಸತ್ಯದೇವರ ಲೋಕವನ್ನು ಹೊಂದಿದನು.

॥ ಇಲ್ಲಿಗೆ ಸ್ಕಾಂದಪುರಾಣದ ರೇವಾಕಾಂಡದಲ್ಲಿ
ಶ್ರೀಸತ್ಯನಾರಾಯಣಕಥೆಯ ಚತುರ್ಥ ಅಧ್ಯಾಯವು ಮುಗಿಯಿತು ॥

ಸೂತರು ಹೇಳುತ್ತಾರೆ - ಋಷಿಗಳೇ, ಇನ್ನೊಂದು ಕಥೆಯನ್ನು ಹೇಳುತ್ತೇನೆ ಕೇಳಿ. ಸದಾಕಾಲದಲ್ಲೂ ಪ್ರಜೆಗಳ ರಕ್ಷಣೆಯಲ್ಲಿಯೇ ಮಗ್ನನಾದ ತುಂಗಧ್ವಜನೆಂಬ ರಾಜನಿದ್ದನು. ಆ ರಾಜನು ಶ್ರೀಸತ್ಯನಾರಾಯಣನ ಪ್ರಸಾದಕ್ಕೆ ಅವಮಾನ ಮಾಡಿದ್ದರಿಂದ ತುಂಬಾ ಸಂಕಷ್ಟಕ್ಕೆ ಗುರಿಯಾದನು. ಹೇಗೆಂದರೆ, ಒಂದು ದಿನ ಆ ರಾಜನು ಬೇಟೆಗಾಗಿ ಅರಣ್ಯಕ್ಕೆ ಹೋಗಿ, ಅಲ್ಲಿ ಬೇಟೆಯಾಡಿ ವಿಶ್ರಾಂತಿಗಾಗಿ ಆಲದ ಮರದ ಬುಡದಲ್ಲಿ ಕುಳಿತಿದ್ದನು. ಗೋಪಾಲಕರು ಅಲ್ಲಿ ಸಂತೋಷದಿಂದ ಭಕ್ತಿಯುಕ್ತರಾಗಿ ಮಾಡುವ ಶ್ರೀಸತ್ಯನಾರಾಯಣ ಪೂಜೆಯನ್ನು ನೋಡಿ, ಅಧಿಕಾರದ ಮದದಿಂದ ಕೂಡಿದ ಆ ರಾಜನು ಅಲ್ಲಿಗೆ ಹೋಗಲಿಲ್ಲ. ದೇವರಿಗೆ ನಮಸ್ಕರಿಸಲಿಲ್ಲ. ಗೋಪಾಲಕರು ದೇವರ ಪೂಜೆಯನ್ನು ಮುಗಿಸಿ, ಪ್ರಸಾದವನ್ನು

ರಾಜನ ಹತ್ತಿರ ತಂದಿಟ್ಟು ತಮ್ಮ ಸ್ಥಳಕ್ಕೆ ಹೋಗಿ ಎಲ್ಲರೂ ತೀರ್ಥ-ಪ್ರಸಾದ ಸ್ವೀಕಾರ ಮಾಡಿದರು. ರಾಜನು ತನ್ನ ಮುಂದಿರುವ ಪ್ರಸಾದವನ್ನೂ ಕೂಡಾ ಸ್ವೀಕರಿಸದೆ, ರಾಜ್ಯಕ್ಕೆ ಹೊರಟದ್ದರಿಂದ ಅತ್ಯಂತ ದುಃಖಸಾಗರದಲ್ಲಿ ಮುಳುಗಿದನು. ಅವನ ನೂರು ಮಂದಿ ಮಕ್ಕಳು ಮೃತರಾದರು. ಅರಮನೆಯಲ್ಲಿದ್ದ ಸಂಪತ್ತೆಲ್ಲವೂ ನಾಶಹೊಂದಿತು. ಹೀಗಾಗಲು ಸತ್ಯದೇವರ ಅವಕೃಪೆಗೆ ನಾನು ಪಾತ್ರನಾಗಿದ್ದೇನೆ. ಈ ವಿಷಯದಲ್ಲಿ ಸಂಶಯವೇ ಇಲ್ಲ. ಯಾವ ಸ್ಥಳದಲ್ಲಿ ಶ್ರೀಸತ್ಯನಾರಾಯಣನಿಗೆ ನಾನು ಅವಮಾನವನ್ನು ಮಾಡಿದೆನೋ, ಅಲ್ಲಿಯೇ ಹೋಗಿ ಶ್ರೀಸತ್ಯನಾರಾಯಣನ ಪೂಜೆಯನ್ನು ಮಾಡಬೇಕೆಂದು ಮನಸ್ಸಿನಲ್ಲಿ ತೀರ್ಮಾನಿಸಿದನು. ಕೂಡಲೇ ಆ ಸ್ಥಳಕ್ಕೆ ಹೋಗಿ ಗೋಪಾಲಕರಿಂದೊಡಗೂಡಿ ಶ್ರೀಸತ್ಯನಾರಾಯಣನ ಪೂಜೆಯನ್ನು ಮಾಡಿದನು. ಕ್ಷಮಾಸಮುದ್ರನಾದ ಶ್ರೀಸತ್ಯನಾರಾಯಣನು ಭಕ್ತಿ-ಶ್ರದ್ಧೆಯಿಂದ ತನ್ನ ಪೂಜೆಯನ್ನು ಮಾಡಿದ ಸಕಲ ಸಂಪತ್ತುಗಳನ್ನು ಹಿಂದಿರುಗಿಸಿದನು. ಹೀಗೆ ಈ ರಾಜನು ಭೂಲೋಕದ ಸಕಲ ಭೋಗ-ಭಾಗ್ಯಗಳನ್ನು ಅನುಭವಿಸಿ, ಜೀವಿತಾಂತದಲ್ಲಿ ಸತ್ಯದೇವರ ಲೋಕವನ್ನು ಹೊಂದಿದನು. ಇಂತಹ ಪರಮ ದುರ್ಲಭವಾದ ಈ ವ್ರತವನ್ನು ಶ್ರದ್ಧಾ-ಭಕ್ತಿಪೂರ್ವಕವಾಗಿ ಯಾರು ಮಾಡುತ್ತಾರೋ ಮತ್ತು ಈ ಕಥೆಯನ್ನು ಯಾರು ಕೇಳುವರೋ ಅವರು ಶ್ರೀಸತ್ಯನಾರಾಯಣನ ಅನುಗ್ರಹದಿಂದ ಎಲ್ಲಾ ಸಂಪತ್ತುಗಳಿಂದ ಅಭಿವೃದ್ಧಿಯನ್ನು ಪಡೆಯುವರು. ಇಂತಹ ವ್ರತವನ್ನು ಬಡವನು ಮಾಡುವುದರಿಂದ ಐಶ್ವರ್ಯವಂತನಾಗುವನು. ಬಂಧಿತನು ಬಂಧದಿಂದ ಮುಕ್ತನಾಗುವನು. ಈ ವಿಷಯದಲ್ಲಿ ಸಂಶಯವಿಲ್ಲ. ಋಷಿಗಳೇ, ಈ ವ್ರತವನ್ನು ಕೇವಲ ಮಾಡುವುದರಿಂದಲೇ ಮಾನವನು ಎಲ್ಲ ರೀತಿಯ ದುಃಖಗಳಿಂದ ಬಿಡುಗಡೆ ಹೊಂದುತ್ತಾನೆ. ಕಲಿಯುಗದಲ್ಲಂತೂ ಶ್ರೀಸತ್ಯನಾರಾಯಣನ ಪೂಜೆಯು ಬಹಳ ಶೀಘ್ರಫಲ ಕೊಡುವ ವ್ರತವಾಗಿದೆ. ಶ್ರೀಸತ್ಯನಾರಾಯಣನಿಗೆ ಕೆಲವರು 'ಕಾಲ'ನೆಂದೂ, ಕೆಲವರು 'ಸತ್ಯ'ನೆಂದೂ, ಕೆಲವರು 'ಈಶ'ನೆಂದೂ, ಕೆಲವರು 'ಸತ್ಯನಾರಾಯಣ'ನೆಂದೂ, ಕೆಲವರು 'ಸತ್ಯದೇವ'ನೆಂದೂ ಕರೆಯುತ್ತಾರೆ. ಹೀಗೆ ನಾನಾ ರೂಪಗಳನ್ನು ಧರಿಸಿ, ಜನರ ಮನೋರಥಗಳನ್ನು ಪೂರ್ಣ ಮಾಡಿಕೊಡುವಂತಹ ಈ ಭಗವಂತನು ಈ ಕಲಿಯುಗದಲ್ಲಿ 'ಸತ್ಯವ್ರತ' ಎಂಬ ಹೆಸರಿನಿಂದ ಅವತಾರವನ್ನು ಮಾಡಿರುತ್ತಾನೆ. ಋಷಿಗಳಿರಾ, ಶ್ರೀಸತ್ಯನಾರಾಯಣನ ಕಥೆಯನ್ನು ನಿತ್ಯದಲ್ಲಿಯೂ ಯಾರು ಪಠಿಸುವರೋ ಮತ್ತು ಯಾರು ಶ್ರವಣ ಮಾಡುವರೋ ಅವರ ಪಾಪ(ದುಃಖ)ಗಳೆಲ್ಲ ನಿಶ್ಚಯವಾಗಿ ಶ್ರೀಸತ್ಯನಾರಾಯಣನ ಅನುಗ್ರಹದಿಂದ ನಾಶಹೊಂದುವವು.

|| ಇಲ್ಲಿಗೆ ಸ್ಕಾಂದಪುರಾಣದ ರೇವಾಕಾಂಡದಲ್ಲಿ
ಶ್ರೀಸತ್ಯನಾರಾಯಣಕಥೆಯ ತೃತೀಯ ಅಧ್ಯಾಯವು ಮುಗಿಯಿತು ||



## ।। ಅಶೂನ್ಯಶಯನವ್ರತಮ್ ।।

**(ಚಾತುರ್ಮಾಸ್ಯ ಕೃಷ್ಣಪಕ್ಷದ ನಾಲ್ಕೂ ತಿಂಗಳಿನ ಬಿದಿಗೆಯಂದು ಮಾಡುವುದು)**

ಚಂದ್ರೋದಯಕಾಲದಲ್ಲಿ ಶ್ರೀಲಕ್ಷ್ಮೀನಾರಾಯಣರ ಪ್ರತಿಮೆಯನ್ನು ಹೊಸ ಹಾಸಿಗೆಯಲ್ಲಿಟ್ಟು ಪೂಜಿಸಿ, ಹಾಸಿಗೆ ಸಮೇತ ಶ್ರೀಲಕ್ಷ್ಮೀನಾರಾಯಣ ಪ್ರತಿಮೆಯನ್ನು ದಾನ ಮಾಡಬೇಕು. ಇದರಿಂದ ಏಳು ಜನ್ಮಗಳವರೆಗೆ ದಾಂಪತ್ಯ ಸುಖವು ಅಖಂಡ-ವಾಗಿರುತ್ತದೆ. ರಾತ್ರಿ ಚಂದ್ರನಿಗೆ ಅರ್ಘ್ಯವನ್ನು ಕೊಟ್ಟು, ಭೋಜನವನ್ನು ಮಾಡಬೇಕು.

**ವಿಧಾನ** : ಆಚಮನ, ಪ್ರಾಣಾಯಾಮ, ಸಂಕಲ್ಪಗಳನ್ನು ಮಾಡಿ, ಶುಭತಿಥೌ ಮಮ ಅವಿಚ್ಛಿನ್ನ ಗಾರ್ಹಸ್ಥ್ಯ, ಅಕ್ಷಯ ದಾಂಪತ್ಯ, ಪುತ್ರಧನಾದ್ಯವಿಯೋಗಾದಿ ಫಲಪ್ರಾಪ್ತ್ಯರ್ಥಂ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತಭಾರತೀರಮಣಮುಖ್ಯ-ಪ್ರಾಣಾಂತರ್ಗತಶ್ರೀಲಕ್ಷ್ಮೀನಾರಾಯಣಪ್ರೇರಣಯಾ ಶ್ರೀಲಕ್ಷ್ಮೀನಾರಾಯಣಪ್ರೀತ್ಯರ್ಥಂ ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ ಕೃಷ್ಣಪಕ್ಷ ದ್ವಿತೀಯಾಯಾಂ ವಿಹಿತಂ ಅಶೂನ್ಯಶಯನವ್ರತಂ ಕರಿಷ್ಯೇ ।। (ಮಂತ್ರಾಕ್ಷತೆ-ನೀರು ಬಿಡಬೇಕು)

**ಪರ್ಯಂಕಸ್ಥಿತ ಶ್ರೀರಾಘವೇಂದ್ರತೀರ್ಥಗುರ್ವಂತರ್ಗತಭಾರತೀರಮಣಮುಖ್ಯ-ಪ್ರಾಣಾಂತರ್ಗತಶ್ರೀಲಕ್ಷ್ಮೀನಾರಾಯಣಾಯ ನಮಃ ।।**

(ಈ ಮಂತ್ರದಿಂದ ಪೂಜಿಸಬೇಕು)

**ಪ್ರಾರ್ಥನಾಮಂತ್ರಃ :**

**ಪತ್ನೀಭರ್ತುರ್ವಿಯೋಗಂ ಚ ಭರ್ತಾಭಾರ್ಯಾ ಸಮುದ್ಭವಮ್ ।**
**ನಾಪ್ನುವಂತಿ ಯಥಾ ದುಃಖಂ ದಾಂಪತ್ಯಾನಿ ತಥಾ ಕುರು ।।**

**ಲಕ್ಷ್ಮ್ಯಾ ವಿಯುಜ್ಯತೇ ದೇವ ನ ಕದಾಚಿದ್ಯಥಾ ಭವಾನ್ ।**
**ತಥಾ ಕಲತ್ರ ಸಂಬಂಧೋ ದೇವ ಮಾ ಮೇ ವಿಯುಜ್ಯತಾಮ್ ।।**

(ಸ್ತ್ರೀಯರು - 'ತಥಾ ಚ ಪತಿ ಸಂಬಂಧೋ' ಎಂದು ಹೇಳಬೇಕು)

**ಲಕ್ಷ್ಮ್ಯಾ ನ ಶೂನ್ಯಂ ವರದ ಯಥಾ ತೇ ಶಯನಂ ಸದಾ ।**
**ಶಯ್ಯಾ ಮಮಾಪ್ಯಶೂನ್ಯಾಸ್ತು ತಥಾತ್ರ ಮಧುಸೂದನ ।।**

ತಥಾ ಶ್ರಿಯಾ ಯತೋ ವಿಷ್ಣುಃ ಲಕ್ಷ್ಮೀರ್ದೇವ ತ್ವಯಾ ಯಥಾ ।
ಪ್ರಸಾದಾತ್ತವ ದೇವೇಶ ಭಕ್ತಿರಸ್ತು ತಥಾವಯೋಃ ॥
ಮಾಸ್ಮ ಪುತ್ರಾಃ ಪ್ರಣಶ್ಯಂತು ಮಾ ಧನಂ ಮಾ ಕುಲಕ್ರಮಃ ।
ಅಗ್ನಯೇ ಮಾ ಪ್ರಣಶ್ಯಂತು ಗೃಹಭಂಗಸ್ತು ಮಾವಯೋಃ ॥



## ವಿಷ್ಣುಪಂಚಕದ ದೇವತೆಗಳು

**ಶುಕ್ಲಪಕ್ಷ ಏಕಾದಶೀಯಂದು** : ಕೇಶವಾಯ, ನಾರಾಯಣಾಯ, ಮಾಧವಾಯ, ಗೋವಿಂದಾಯ, ವಿಷ್ಣವೇ, ಮಧುಸೂದನಾಯ, ತ್ರಿವಿಕ್ರಮಾಯ, ವಾಮನಾಯ, ಶ್ರೀಧರಾಯ, ಹೃಷೀಕೇಶಾಯ, ಪದ್ಮನಾಭಾಯಾ, ದಾಮೋದರಾಯ ನಮಃ । (ಎಲ್ಲಾ ನಾಮಗಳಿಗೂ 'ನಮಃ' ಎಂದು ಸೇರಿಸಿರಿ)

(ಕೇಶವಂ ತರ್ಪಯಾಮಿ, ನಾರಾಯಣಂ ತರ್ಪಯಾಮಿ....... ಹೀಗೆ ತರ್ಪಣ ಕೊಡಬೇಕು)

**ಕೃಷ್ಣಪಕ್ಷ ಏಕಾದಶೀಯಂದು** : ಸಂಕರ್ಷಣಾಯ, ವಾಸುದೇವಾಯ, ಪ್ರದ್ಯುಮ್ನಾಯ, ಅನಿರುದ್ಧಾಯ, ಪುರುಷೋತ್ತಮಾಯ, ಅಧೋಕ್ಷಜಾಯ, ನಾರಸಿಂಹಾಯ, ಅಚ್ಯುತಾಯ, ಜನಾರ್ದನಾಯ, ಉಪೇಂದ್ರಾಯ, ಹರಯೇ, ಶ್ರೀಕೃಷ್ಣಾಯ ನಮಃ । (ಎಲ್ಲಾ ನಾಮಗಳಿಗೂ 'ನಮಃ' ಎಂದು ಸೇರಿಸಿರಿ)

(ಸಂಕರ್ಷಣಂ ತರ್ಪಯಾಮಿ, ವಾಸುದೇವಂ ತರ್ಪಯಾಮಿ....... ಹೀಗೆ ತರ್ಪಣ ಕೊಡಬೇಕು)

**ಹುಣ್ಣಿಮೆಯಂದು** : ವಿಧವೇ, ಶಶಿನೇ, ಶಶಾಂಕಾಯ, ಚಂದ್ರಾಯ, ಸೋಮಾಯ, ಉಡುಪಾಯ, ಅಮೃತಾಯ, ಮನೋಹರಾಯ, ರಾಮಾಯ, ಹಿಮಕೃತೇ, ನಿಶಾಕೃತೇ, ದೀಪ್ಯಮಾನಾಯ ನಮಃ । (ಎಲ್ಲಾ ನಾಮಗಳಿಗೂ 'ನಮಃ' ಎಂದು ಸೇರಿಸಿರಿ)

(ವಿಧುಂ ತರ್ಪಯಾಮಿ, ಶಶಿನಂ ತರ್ಪಯಾಮಿ....... ಹೀಗೆ ತರ್ಪಣ ಕೊಡಬೇಕು)

**ಅಮಾವಾಸ್ಯೆಯಂದು** : ಮಹೀಧರಾಯ, ಜಗನ್ನಾಥಾಯ, ದೇವೇಂದ್ರಾಯ, ದೇವಕೀಸುತಾಯ, ಚತುರ್ಭುಜಾಯ, ಗದಾಪಾಣಯೇ ಸುರಮೀಢಾಯ, ಚಾರ್ವಂಗಾಯ, ಚಕ್ರಪಾಣಯೇ, ಸುರಮಿತ್ರಾಯ, ಅಸುರಾಂತಕಾಯ ನಮಃ । (ಎಲ್ಲಾ ನಾಮಗಳಿಗೂ 'ನಮಃ' ಎಂದು ಸೇರಿಸಿರಿ)

(ಮಹೀಧರಂ ತರ್ಪಯಾಮಿ, ಜಗನ್ನಾಥಂ ತರ್ಪಯಾಮಿ....... ಹೀಗೆ ತರ್ಪಣ ಕೊಡಬೇಕು)

**ಶ್ರವಣನಕ್ಷತ್ರದಂದು** : ಪುರುಷೋತ್ತಮಾಯ, ಶಾರ್ಙ್ಗಧನ್ವಿನೇ, ಗರುಡಧ್ವಜಾಯ, ಅನಂತಾಯ, ನಿತ್ಯಾಯ, ವೇದಗರ್ಭಾಯ, ಯಜ್ಞಪುರುಷಾಯ, ಸುಬ್ರಹ್ಮಣ್ಯಾಯ, ಜಯಾಯ, ಶೌರಯೇ, ಗೋವರ್ಧನಾಯ, ಪುಂಡರೀಕಾಕ್ಷಾಯ ನಮಃ । (ಎಲ್ಲಾ ನಾಮಗಳಿಗೂ 'ನಮಃ' ಎಂದು ಸೇರಿಸಿರಿ)

(ಪುರುಷೋತ್ತಮಂ ತರ್ಪಯಾಮಿ, ಶಾರ್ಙ್ಗಧನ್ವಿನಂ ತರ್ಪಯಾಮಿ....... ಹೀಗೆ ತರ್ಪಣ ಕೊಡಬೇಕು)

✦ ✦ ✦

## ಪಯೋವ್ರತಮ್

ಶ್ರೀಮದ್ಭಾಗವತದಲ್ಲಿ ಕಶ್ಯಪರು ತಮ್ಮ ಪತ್ನಿಯಾದ ಅದಿತಿಗೆ ಈ ಪಯೋವ್ರತವನ್ನು ಉಪದೇಶಿಸಿದ್ದಾರೆ. ಸಂತಾನ, ಸಂಪತ್ತು, ಕಳೆದು ಹೋದ ಅಧಿಕಾರ ಸ್ಥಾನಮಾನಗಳ ಪುನಃ ಪ್ರಾಪ್ತಿ, ಮುಂತಾದ ಫಲಗಳನ್ನು ಅಪೇಕ್ಷಿಸುವ ಸ್ತ್ರೀ-ಪುರುಷರು ಫಾಲ್ಗುಣ ಶುದ್ಧ ಪ್ರತಿಪತ್ತಿನಿಂದ ಶುದ್ಧ ದ್ವಾದಶೀ(12 ದಿನಗಳು)ಯವರೆಗೆ ಈ ವ್ರತವನ್ನು ಆಚರಿಸಿ ತ್ರಯೋದಶಿಯ ದಿನ ಉದ್ಯಾಪನೆ ಮಾಡಬೇಕು. ಪಯೋವ್ರತ ಆಚರಿಸುವವರು ನಿತ್ಯ ಭಾಗವತದಲ್ಲಿ ಕೊಟ್ಟಿರುವ ಕೆಳಗಿನ ಭಗವಂತನ ಸ್ತುತಿಯನ್ನು ಪಠಿಸಬೇಕು.

ನಮಸ್ತುಭ್ಯಂ ಭಗವತೇ ಪುರುಷಾಯ ಮಹೀಯಸೇ ।
ಸರ್ವಭೂತನಿವಾಸಾಯ ವಾಸುದೇವಾಯ ಸಾಕ್ಷಿಣೇ ॥ ೧ ॥

ನಮೋಽವ್ಯಕ್ತಾಯ ಸೂಕ್ಷ್ಮಾಯ ಪ್ರಧಾನಪುರುಷಾಯ ಚ ।
ಚತುರ್ವಿಂಶದ್ಗುಣಜ್ಞಾಯ ಗುಣಸಂಸ್ಥಾನಹೇತವೇ ॥ ೨ ॥

ನಮೋ ದ್ವಿಶೀರ್ಷ್ಣೇ ತ್ರಿಪದೇ ಚತುಃಶೃಂಗಾಯ ತಂತವೇ ।
ಸಪ್ತಹಸ್ತಾಯ ಯಜ್ಞಾಯ ತ್ರಯೀವಿದ್ಯಾತ್ಮನೇ ನಮಃ ॥ ೩ ॥

ನಮಃ ಶಿವಾಯ ರುದ್ರಾಯ ನಮಃ ಶಕ್ತಿಧರಾಯ (ಸಾಧಾರಣಾಯ) ಚ ।
ಸರ್ವವಿದ್ಯಾಧಿಪತಯೇ ಭೂತಾನಾಂ ಪತಯೇ ನಮಃ ॥ ೪ ॥

ನಮೋ ಹಿರಣ್ಯಗರ್ಭಾಯ ಪ್ರಾಣಾಯ ಜಗದಾತ್ಮನೇ ।
ಯೋಗೈಶ್ವರ್ಯಶರೀರಾಯ ನಮಸ್ತೇ ಯೋಗಹೇತವೇ ॥ ೫ ॥

ನಮಸ್ತೇ ಆದಿದೇವಾಯ ದೇವದೇವಾಯ ತೇ ನಮಃ ।
ನಾರಾಯಣಾಯ ಋಷಯೇ ನರಾಯ ಹರಯೇ ನಮಃ ॥ ೬ ॥

ನಮೋ ಮರಕತಶ್ಯಾಮವಪುಷೇಽಧಿಗತಶ್ರಿಯೇ ।
ಕೇಶವಾಯ ನಮಸ್ತುಭ್ಯಂ ನಮಸ್ತೇ ಪೀತವಾಸಸೇ ॥ ೭ ॥

ತ್ವಂ ಸರ್ವವರದಃ ಪುಂಸಾಂ ವರೇಣ್ಯ ವರದರ್ಷಭ ।
ಅತಸ್ತೇ ತಪಸಾ ಧೀರಾಃ ಪಾದರೇಣುಮುಪಾಸತೇ ॥ ೮ ॥

ಅನ್ವರ್ತಯಂತ ಯಂ ದೇವಾಃ ಶ್ರೀವಿನಿರ್ಜಿತಪದ್ಮಯೋಃ ।
ಸ್ಪೃಹಯಂತ ಇವಾಮೋದಂ ಭಗವಾನ್ ಮೇ ಪ್ರಸೀದತಾಮ್ ॥ ೬ ॥

* * *

## ಲಕ್ಷಪ್ರದಕ್ಷಿಣೆ ವ್ರತಮ್

ಚಾತುರ್ಮಾಸ್ಯೇ ತು ಸಂಪ್ರಾಪ್ತೇ ಕುರ್ಯಾಲ್ಲಕ್ಷಪ್ರದಕ್ಷಿಣಮ್ ।
ಸ್ವಕೃತಂ ಪಾಪಮುಚ್ಚಾರ್ಯ ಪಶ್ಚಾತ್ತಾಪಪುರಃಸರಃ ॥

ಆಷಾಢ್ಯಾಂ ಚ ಸಮಾರಭ್ಯ ಕಾರ್ತಿಕ್ಯಾಂ ತು ಜಿತೇಂದ್ರಿಯಃ ।
ಲಕ್ಷಂ ಸಮಾಪ್ಯ ಪಶ್ಚಾತ್ತು ಕುರ್ಯಾದುದ್ಯಾಪನಂ ವ್ರತೀ ॥

ಚಾತುರ್ಮಾಸ್ಯವು ಬಂದಾಗ ಲಕ್ಷಪ್ರದಕ್ಷಿಣ ವ್ರತವನ್ನು ಗ್ರಹಣಮಾಡಿ ಆಚರಿಸಬೇಕು. ಆಷಾಢಮಾಸದಲ್ಲಿ ಹುಣ್ಣಿಮೆಯ ದಿನ ಈ ವ್ರತವನ್ನು ಪ್ರಾರಂಭಿಸಿ ಕಾರ್ತೀಕಮಾಸದ ಹುಣ್ಣಿಮೆಯವರೆಗೆ ದೇವರಿಗೆ ಒಂದು ಲಕ್ಷ ಪ್ರದಕ್ಷಿಣೆ ಹಾಕಬೇಕು. ಪ್ರತಿದಿನ ತಾನು ಮಾಡಿರುವ ಪಾಪಗಳನ್ನು ಪಶ್ಚಾತ್ತಾಪಪೂರ್ವಕ ಹೇಳಿಕೊಂಡು ಲಕ್ಷಪ್ರದಕ್ಷಿಣವನ್ನು ಹಾಕಿ ಮುಗಿಸಿ ಅನಂತರ ಉದ್ಯಾಪನೆ ಮಾಡಬೇಕು.

ಪ್ರತಿದಿನ ಪ್ರದಕ್ಷಿಣ ಹಾಕುವಾಗ ಹೇಳಬೇಕಾದ ಮಂತ್ರ -

ಅನಂತಮವ್ಯಯೇ ವಿಷ್ಣುಂ ಲಕ್ಷ್ಮೀನಾರಾಯಣಂ ಹರಿಮ್ ।
ಜಗದೀಶ ನಮಸ್ತುಭ್ಯಂ ಪ್ರದಕ್ಷಿಣ ಪದೇ ಪದೇ ॥

* * *

## ಲಕ್ಷನಮಸ್ಕಾರ ವ್ರತಮ್

ಚಾತುರ್ಮಾಸ್ಯದಲ್ಲಿ ಮಾಡಬೇಕಾದ ವ್ರತಗಳಲ್ಲಿ ಲಕ್ಷನಮಸ್ಕಾರ ವ್ರತವೂ ಒಂದು. ಸುಮಂಗಲೆಯರು ಮತ್ತು ವಿಧವೆಯರು ಸಹ ಈ ವ್ರತಕ್ಕೆ ಅರ್ಹರೆನಿಸುತ್ತಾರೆ.

ಚಾತುರ್ಮಾಸ್ಯೇ ತು ಸಂಪ್ರಾಪ್ತೇ ಕೇಶವೇ ಶಯನಂ ಗತೇ ।
ಆಷಾಢಸ್ಯ ಸಿತೇ ಪಕ್ಷೇ ಏಕಾದಶ್ಯಾಂ ಸಮಾಹಿತಃ ॥

"ಚಾತುರ್ಮಾಸ್ಯದ ಕಾಲವು ಪ್ರಾಪ್ತವಾದಾಗ ಶ್ರೀಹರಿಯು ನಾಲ್ಕು ತಿಂಗಳು ಯೋಗನಿದ್ರಾಮುದ್ರೆಯಲ್ಲಿರುತ್ತಾನೆ. ಆಗ ಆಷಾಢಮಾಸದ ಶುಕ್ಲಪಕ್ಷ ಏಕಾದಶಿಯ ದಿನ ಮನಸ್ಸನ್ನು ಏಕಾಗ್ರವಾಗಿಟ್ಟು ಈ ಲಕ್ಷನಮಸ್ಕಾರ ವ್ರತವನ್ನು ಪ್ರಾರಂಭಿಸಬೇಕು."

**ವ್ರತಸಂಕಲ್ಪ :**

**ಮಮ ಲಕ್ಷನಮಸ್ಕಾರವ್ರತಸ್ಯ ಪುರುಷೋತ್ತಮ ।**
**ನಿರ್ವಿಘ್ನಂ ತದ್ವ್ರತಂ ಸಾಂಗಂ ಕುರು ತ್ವಂ ಕೃಪಯಾ ಹರೇ ॥**

ಹೀಗೆ ಸಂಕಲ್ಪ ಮಾಡಿ ಕಾರ್ತೀಕಮಾಸದ ಹುಣ್ಣಿಮೆಯವರೆಗೆ ಈ ವ್ರತವನ್ನು ಮಾಡಿ ಹುಣ್ಣಿಮೆ ಉದ್ಯಾಪನೆ ಮಾಡಬೇಕು.

**ಅರ್ಘ್ಯಮಂತ್ರ :**

**ದೇವ ದೇವ ಜಗನ್ನಾಥ ಸರ್ವವ್ರತಫಲಪ್ರದ ।**
**ವ್ರತೇನಾನೇನ ಸುಪ್ರೀತೋ ಗೃಹಾಣಾರ್ಘ್ಯಂ ಮಯಾರ್ಪಿತಮ್ ॥**

ಈ ವ್ರತವು ಮಹಾಪುಣ್ಯಪ್ರದವಾದುದಾಗಿದೆ. ಪಾಪಾರಣ್ಯಗಳನ್ನು ಸುಡಲು ಇದು ಕಾಡ್ಗಿಚ್ಚಿನಂತಿರುವ ವ್ರತ. ಪಾಪಗಳೆಂಬ ಪರ್ವತಕ್ಕೆ ವಜ್ರಾಯುಧದಂತಿರುವ ವ್ರತ. ಪಾಪಗಳೆಂಬ ಸಾಗರಕ್ಕೆ ನಾವೆಯಂತಿರುವ ವ್ರತ. ಎಲ್ಲ ಪಾಪಗಳನ್ನು ಕಳೆದು ಕೊನೆಗೆ ವಿಷ್ಣು ಪ್ರಸಾದಕ್ಕೂ ಸಾಧನವಾಗಿರುವ ವ್ರತವಿದು.

* * *

## ಲಕ್ಷಬತ್ತಿ ವ್ರತ ಮತ್ತು ಲಕ್ಷದೀಪ ವ್ರತಮ್

ಲಕ್ಷವರ್ತಿವ್ರತ ಎಂದರೆ ಒಂದು ಲಕ್ಷ ಬತ್ತಿಗಳನ್ನು ದೇವರಿಗೆ ಸಮರ್ಪಿಸುವ ವ್ರತ. ವೈಶಾಖ, ಕಾರ್ತೀಕ ಮತ್ತು ಮಾಘಮಾಸಗಳು ಲಕ್ಷಬತ್ತಿ ವ್ರತಕ್ಕೆ ವಿಹಿತವಾದ ಕಾಲಗಳು. ಚಾತುರ್ಮಾಸ್ಯದಲ್ಲಿ ಶ್ರಾವಣ ಶುಕ್ಲ ಪ್ರತಿಪತ್ತಿನಿಂದ ಪ್ರಾರಂಭಿಸಿ ಕಾರ್ತೀಕ ಪೂರ್ಣಿಮಾದವರೆಗೆ ಪ್ರತಿದಿನ ಒಂದು ಸಹಸ್ರ ಬತ್ತಿಗಳನ್ನು ಆಕಳ ತುಪ್ಪದಲ್ಲಿ ಅಥವಾ ತಿಲತೈಲದಲ್ಲಿ ತೋಯಿಸಿ, ಮೇಲೆ ಕರ್ಪೂರವನ್ನು ಹಾಕಿ ದೇವರೆದುರಿನಲ್ಲಿ ಹಚ್ಚಿಡಬೇಕು.ಕೊನೆಗೆ ಉದ್ಯಾಪನೆಯನ್ನು ಮಾಡಬೇಕು.

**ವ್ರತಸಮರ್ಪಣೆ ಮಂತ್ರ :**

**ಕ್ರಿಯಾಹೀನಂ ಭಕ್ತಿಹೀನಂ ದ್ರವ್ಯಹೀನಂ ತಥೈವ ಚ ।**
**ಮಂತ್ರಹಿನಂ ಕೃತಂ ಯಚ್ಚ ಪರಿಪೂರ್ಣಂ ತದಸ್ತು ಮೇ ॥**

**ಬಾಲ್ಯೇ ವಯಸಿ ಯತ್ಪಾಪಂ ಯೌವನೇ ವಾಪಿ ಯತ್ಕೃತಮ್ ।**
**ವಾರ್ಧಕೇಽಪಿ ಕೃತಂ ಪಾಪಂ ತತ್ಸರ್ವಂ ನಶ್ಯತಿ ಧ್ರುವಮ್ ॥**



## ॥ ಸಂವತ್ಸರಗಳು ॥

ಪ್ರಭವೋ ವಿಭವಃ ಶುಕ್ಲಃ ಪ್ರಮೋದೂತಃ ಪ್ರಜೋತ್ಪತ್ತಿಃ ।
ಆಂಗೀರಸಃ ಶ್ರೀಮುಖಃ ಭಾವೋ ಯುವೋ ಧಾತುರೀಶ್ವರಃ ॥

ಬಹುಧಾನ್ಯಃ ಪ್ರಮಾಥೀ ಚ ವಿಕ್ರಮೋ ವಿಷುವತ್ಸರಃ ।
ಚಿತ್ರಭಾನುಃ ಸ್ವಭಾನುಶ್ಚ ತಾರಣಃ ಪಾರ್ಥಿವೋಽವ್ಯಯಃ ॥

ಸರ್ವಜಿತ್ ಸರ್ವಧಾರಿ ಚ ವಿರೋಧಿ ವಿಕೃತಿಃ ಖರಃ ।
ನಂದನೋ ವಿಜಯಶ್ಚೈವ ಜಯೋ ಮನ್ಮಥ ದುರ್ಮುಖಿ ॥

ಹೇವಿಳಂಬಿ ವಿಳಂಬಿಶ್ಚ ವಿಕಾರಿ ಶಾರ್ವರಿ ಪ್ಲವಃ ।
ಶುಭಕೃತ್ ಶೋಭಕೃತ್ ಕ್ರೋಧಿ ವಿಶ್ವಾವಸು ಪರಾಭವಃ ॥

ಪ್ಲವಂಗಃ ಕೀಲಕಃ ಸೌಮ್ಯ ಸಾಧಾರಣ ವಿರೋಧಿಕೃತ್ ।
ಪರಿಧಾವಿ ಪ್ರಮಾದೀ ಚ ಆನಂದೋ ರಾಕ್ಷಸೋ ನಲಃ ॥

ಪೈಂಗಲಃ ಕಾಲಯುಕ್ತಿಶ್ಚ ಸಿದ್ಧಾರ್ಥಿ ರೌದ್ರಿ ದುರ್ಮತಿಃ ।
ದುಂದುಭಿರ್ರುಧಿರೋದ್ಗಾರಿ ರಕ್ತಾಕ್ಷಿ ಕ್ರೋಧನ ಕ್ಷಯಃ ॥

✦ ✦ ✦

## ॥ ಪೂರ್ಣಪ್ರಜ್ಞಗ್ರಂಥಮಾಲಿಕಾಸ್ತುತಿಃ ॥

ಭಾಷ್ಯಾಣಾಂ ದಶಕಂ ಚ ಪಂಚಕಯುತಂ ತಿಸ್ರಶ್ಚ ನಿರ್ಣೀತಯೋ
ವಿಷ್ಣೋಃ ಸ್ತೋತ್ರಯುಗಂ ದಶಪ್ರಕರಣಂ ಕಲ್ಪದ್ವಯಂ ಚ ಸ್ಮೃತಿಃ ।
ಶ್ರೀಕೃಷ್ಣಾಮೃತತಂತ್ರಸಾರಯಮಕನ್ಯಾಯಾವಲೀದೀಪನಂ
ಯೇನಾಕಾರಿ ಸದೈವ ಮಧ್ವಮುನಿರಾಟ್ ದದ್ಯಾತ್ ಸುವಿದ್ಯಾಂ ಮಮ ॥

✦ ✦ ✦



ಜಗದ್ಗುರು ಶ್ರೀಮನ್ಮಧ್ವಾಚಾರ್ಯರ ಮೂಲಮಹಾಸಂಸ್ಥಾನ

ಶ್ರೀರಾಘವೇಂದ್ರಸ್ವಾಮಿಗಳವರ ಮಠ - ಮಂತ್ರಾಲಯ

ಗ್ರಂಥಪ್ರಕಟನೆಯು ಜ್ಞಾನತೃಷ್ಣರ ತೃಷೆಯನ್ನು ಸುಲಭವಾಗಿ ನೀಗಿಸುವ ಅತ್ಯಂತ ಆಪ್ಯಾಯಮಾನವಾದ ಕಾರ್ಯ. ಜಿಜ್ಞಾಸುಗಳಿಗೆ ಬೇಕಾದ ವಿಷಯವೇನೆಂಬುದನ್ನು ಚೆನ್ನಾಗಿ ಮನನ ಮಾಡಿಕೊಂಡು ಕಾಲ ಕಾಲಕ್ಕೆ ತತ್ಸಂಬಂಧಿತ ಮಾಹಿತಿಯನ್ನು ಸಂಗ್ರಹಿಸಿ, ಗ್ರಂಥರೂಪದಲ್ಲಿ ಪ್ರಕಾಶನ ಪಡಿಸುವುದೇನೂ ಸುಲಭವಲ್ಲ. ಆದರೆ ಈ ರೀತಿಯಾದ ಗ್ರಂಥವೇನಾದರೂ ಪ್ರಕಟಿತವಾದರೆ ಅದನ್ನು ತಮ್ಮ ಸಂಗ್ರಹಕ್ಕೆ ಸೇರಿಸಿಕೊಳ್ಳಲು ಜನಮಾನಸವು ಎಂದೆಂದಿಗೂ ಸನ್ನದ್ಧ ಎನ್ನುವುದಕ್ಕೆ ಕಳೆದ ಸಂವತ್ಸರದಲ್ಲಿ ಶ್ರೀಮಠದಿಂದ ಪ್ರಕಾಶನಗೊಂಡ "ಧರ್ಮಶಾಸ್ತ್ರದರ್ಪಣ" ಎನ್ನುವ ಕೈಪಿಡಿಯೇ ಸಾಕ್ಷಿ. ಶ್ರೀಮಠದ ಪೀಠಾಧಿಪತಿಗಳಾದ ಪರಮಪೂಜ್ಯ ಶ್ರೀಸುಶಮೀಂದ್ರತೀರ್ಥರ ಆಜ್ಞಾನುಸಾರವಾಗಿ ಮುದ್ರಿತವಾದ ಈ ಕಿರುಹೊತ್ತಿಗೆಯ ಸುಮಾರು ಇಪ್ಪತ್ತುಸಾವಿರಕ್ಕೂ ಹೆಚ್ಚಿನ ಪ್ರತಿಗಳನ್ನು ಓದುಗರು ಒಂದೇ ಮಾಸದಲ್ಲಿ ಖರೀದಿಸಿದ್ದಾರೆ ಎನ್ನುವುದು ಗ್ರಂಥದ ಜನಪ್ರಿಯತೆಗೆ ಸಾಕ್ಷಿ. ಪ್ರಾಯಶಃ ಭಾರತೀಯ ಆಧ್ಯಾತ್ಮಸಾಹಿತ್ಯ ಪ್ರಕಾಶನ ವಲಯದಲ್ಲಿ ಇದೊಂದು ದಾಖಲೆಯಾಗಿರಲಿಕ್ಕೂ ಸಾಕು. ಓದುಗರ ಈ ಪ್ರೋತ್ಸಾಹದಿಂದ ಸ್ಫೂರ್ತಿಗೊಂಡು ಶ್ರೀಮಠವು ಈ ಬಾರಿ ಮತ್ತೊಂದು ವಿನೂತನವಾದ ಪ್ರಯೋಗಕ್ಕೆ ಕೈಹಾಕಿ "ವ್ರತಮುಕ್ತಾವಲೀ" ಎನ್ನುವ ಗ್ರಂಥವೊಂದನ್ನು ಓದುಗರ ಕೈಗೆ ಕೊಡಮಾಡುತ್ತಿದೆ. ವ್ರತಾನುಷ್ಠಾನಮಾಡಲಿಚ್ಛಿಸುವ ಸಜ್ಜನರಿಗೆ ಸುಲಭವಾಗುವ ರೀತಿಯಲ್ಲಿ, ಹಲವಾರು ಪ್ರಕಟಿತ-ಅಪ್ರಕಟಿತ ಗ್ರಂಥಗಳನ್ನು ಸಂಶೋಧಿಸಿ, ಮುತ್ತಿನ ಮಾಲೆಯ ರೀತಿಯಲ್ಲಿ ಜತನವಾಗಿ ಇಲ್ಲಿ ಪೋಣಿಸಲಾಗಿದೆ. ಈ ಮಾಲೆಯನ್ನು ಭಕ್ತರು ಪರಮಾತ್ಮನ ಚರಣದ್ವಯಗಳಲ್ಲಿ ಸಮರ್ಪಿಸಲು ಸಮರ್ಥರಾಗಿ, ಶ್ರೀಮಠದ ಶ್ರಮವು ಭಗವತ್ಪ್ರೀತಿಗೆ ಪಾತ್ರವಾಗಿಯೇ ಆಗುತ್ತದೆ ಎಂಬುದು ನಮ್ಮ ದೃಢವಿಶ್ವಾಸ.



ಪ್ರಕಾಶಕರು